# ಹಸಿರು

ಜೂನ್ : 2002

ತಿಂಗಳ ಪತ್ರಿಕೆ

❖ "ವಿವಾಹಮಹಿಳೆಗೆ ಭದ್ರತೆಯನ್ನೊದಗಿಸುವುದೇ?"



❖ ಪೋಟಾ-ನಾವೇಕೆ ವಿರೋಧಿಸಬೇಕು?

❖ ವ್ಯತ್ಯಾಸ

# ಮಾನಸ

ತಿಂಗಳ ಪತ್ರಿಕೆ

ಸಂಪುಟ : 22 ಸಂಚಿಕೆ : 6

ಜುಲೈ : 2002




ಮುಖಪುಟ ಮತ್ತು ಇತರೆ ಚಿತ್ರಗಳು : **ಕನಕಮೂರ್ತಿ**


ವಿಳಾಸ

"ಮಾನಸ" ತಿಂಗಳ ಪತ್ರಿಕೆ

ಪಂಚಾಯಿತಿ ರಸ್ತೆ

ಕಾಡುಗೋಡಿ ಪೋಸ್ಟ್

ಬೆಂಗಳೂರು - 560 067

ಇ-ಮೈಲ್ : manasapathrike@yahoo.co.in



ಸೂಚನೆ : ಬಿಡಿ ಪ್ರತಿ **5-00** ರೂ.

ವಾರ್ಷಿಕ ಚಂದಾ **50-00** ರೂ.

ಒಂದು ವಿಶೇಷ ಸಂಚಿಕೆಯೊಂದಿಗೆ

ಒಟ್ಟು ಹನ್ನೊಂದು ಸಂಚಿಕೆಗಳು


## *ಈ ಸಂಚಿಕೆಯಲ್ಲಿ......*






ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ

ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು - 560 067



# ಸಂಪಾದಕೀಯ

ವಿವಾಹ ಹಾಗೂ ಕುಟುಂಬ ಸಂಸ್ಥೆಯ ಬಗ್ಗೆ ಚರ್ಚೆ, ವಿಶ್ಲೇಷಣೆ ಇಲ್ಲದೆ ಮಹಿಳೆಯರ ಸ್ಥಾನಮಾನವನ್ನು ಕುರಿತು ಚರ್ಚಿಸುವುದು ಅಸಾಧ್ಯ. ವಿವಾಹ ಮಹಿಳೆಗೆ ಭದ್ರತೆಯನ್ನು ನೀಡುತ್ತದೆಯೆಂಬ ಪ್ರಶ್ನೆಯ ಹಿನ್ನಲೆಯಲ್ಲಿ ಹಲವಾರು ಮೂಲಭೂತವಾದ ಪ್ರಶ್ನೆಗಳು ನಮಗೆದುರಾಗುತ್ತವೆ.

ವಿವಾಹ ಸಂಸ್ಥೆಯ ವಿಕಸನದ ಹಾದಿಯನ್ನು ಹಿಂತಿರುಗಿ ನೋಡಿದಾಗ ಖಾಸಗೀ ಆಸ್ತಿಗೂ ಮಹಿಳೆಯರ ಸ್ಥಾನಮಾನಕ್ಕು ನಿಕಟವಾದ ಸಂಬಂಧವಿರುವುದು ಗೋಚರವಾಗುತ್ತದೆ. ಪುರುಷ ಪ್ರಧಾನ ಮೌಲ್ಯಗಳು ಖಾಸಗೀ ಆಸ್ತಿಯ ಭದ್ರತೆಗಾಗಿ ಮಹಿಳೆಯರಿಗೆ ಮಾತ್ರ ಮೀಸಲಾದ ಪಾವಿತ್ರ್ಯದ ಪರಿಕಲ್ಪನೆಯನ್ನು ಹುಟ್ಟುಹಾಕಿ. ಅದರ ಜೊತೆಗೆ ಧಾರ್ಮಿಕ, ಸಾಮಾಜಿಕ ಕಟ್ಟುಪಾಡುಗಳನ್ನು ಮಹಿಳೆಯರ ಮೇಲೆ ಹೇರುತ್ತಾ ಬಂದಿದೆ. ಇಂತಹ ಉಸಿರುಗಟ್ಟಿಸುವ ಕಟ್ಟುಪಾಡುಗಳ ನಡುವೆ ಮಹಿಳೆಯರಿಗೆ ಆಯ್ಕೆಯ ಪ್ರಶ್ನೆಯೇ ಇಲ್ಲ.

ಗಂಡು-ಹೆಣ್ಣಿನ ಮಧುರ ಸಂಬಂಧಗಳು ಪುರುಷ ಪ್ರಧಾನವಾದ ವೈವಾಹಿಕ ಸಂಬಂಧ ಹಾಗೂ ಕೌಟುಂಬಿಕ ರಚನೆಯಲ್ಲಿ ಇಂದು ವ್ಯಾಪಾರೀಕರಣ ಗೊಳ್ಳುತ್ತಿವೆ. ವರದಕ್ಷಿಣೆಯ ಬೇಡಿಕೆ, ವಧು ದಹನ, ಕೌಟುಂಬಿಕ ಹಿಂಸೆ ಆರ್ಥಿಕ ಕಾರಣಗಳೊಂದಿಗೆ ತಳುಕು ಹಾಕಿಕೊಳ್ಳುವುದರಿಂದ ಅಮಾನುಷವಾದ ಸ್ವರೂಪವನ್ನು ಪಡೆಯುತ್ತಿವೆ. ಪುರುಷ ಪ್ರಧಾನ ಮೌಲ್ಯಗಳು ಮಹಿಳೆಯರಿಗೆ ವಿವಾಹ ಅನಿವಾರ್ಯವೆಂಬ ಪರಿಕಲ್ಪನೆಯನ್ನು ಹುಟ್ಟು ಹಾಕಿವೆ. ಇತರ ಎಲ್ಲಾ ಸಾಮಾಜಿಕ ಸಂಬಂಧಗಳಿಗಿಂತ ವೈವಾಹಿಕ ಸಂಬಂಧವನ್ನು ಸಹಜತೆಗೂ ಮೀರಿ ವೈಭವೀಕರಿಸಲಾಗಿದೆ. ಈ ವೈಭವೀಕರಣ ಮಹಿಳೆಯರಿಗೆ ಅನಿವಾರ್ಯತೆಯನ್ನು ಹುಟ್ಟುಹಾಕಿ ಉಸಿರುಗಟ್ಟಿಸುತ್ತವೆ. ವೈಭವೀಕರಣದ ಜೊತೆ ಜೊತೆಗೆ ಪಿತೃಪ್ರಧಾನ ಮೌಲ್ಯಗಳು ಬಲಗೊಳ್ಳುತ್ತಲೇ ಹೋಗುತ್ತವೆ. ಕುಟುಂಬದಲ್ಲಿನ ಗಂಡು-ಹೆಣ್ಣಿನ ಸಂಬಂಧಗಳನ್ನು ಈ ಮೌಲ್ಯಗಳು ನಿರ್ಧರಿಸುತ್ತವೆ. ಈ ಮೌಲ್ಯಗಳ ಅಂತಿಮ ಗುರಿ ಪುರುಷರ ಹಿತಾಸಕ್ತಿಯನ್ನು ಕಾಪಾಡುವುದೇ ಆಗಿದೆ.

ವಿವಾಹದ ವೈಭವೀಕರಣದಿಂದಾಗಿ ಇತರ ಸಂಬಂಧಗಳು ನಗಣ್ಯ ಸ್ಥಿತಿಯನ್ನು ತಲುಪುತ್ತವೆ. ಇದು ವೈವಾಹಿಕ ಸಂಬಂಧವನ್ನು ಖಾಸಗೀಕರಿಸುವುದರಿಂದ ಮಹಿಳೆಯರ ಮೇಲೆ ನಡೆಯುವ ಹಿಂಸೆಯು ಖಾಸಗೀ ಸ್ವರೂಪವನ್ನು ಪಡೆಯುತ್ತದೆ. ಬದಲಾಗುತ್ತಿರುವ ಆರ್ಥಿಕ ಸನ್ನಿವೇಶದಲ್ಲಿ ಹಿಂಸೆಯು ತೀವ್ರವಾಗುತ್ತಾ ಹೋಗುತ್ತದೆ. ಈ ಖಾಸಗೀ ಸ್ವರೂಪದ ಹಿಂಸೆಯು ಮಹಿಳೆಯ ಆಯ್ಕೆಯ ಪ್ರಶ್ನೆಯನ್ನು ಸಹ ನಿರ್ಧರಿಸುತ್ತದೆ.

ವಿವಾಹ ಹಾಗೂ ಕುಟುಂಬದ ರಚನೆ ಹಾಗೂ ಸ್ವರೂಪವನ್ನು ಮಹಿಳೆಯರ ಹಿತಾಸಕ್ತಿಯ ಹಿನ್ನಲೆಯಲ್ಲಿ ಪುನರ್ ವ್ಯಾಖ್ಯಾನ ಮಾಡಬೇಕಾಗುತ್ತದೆ. ಈ ಮೂಲಕ ಗಂಡು ಹೆಣ್ಣಿಗಿಬ್ಬರಿಗೂ ಪೂರಕವಾದ, ಆರೋಗ್ಯಪೂರ್ಣ, ಸಂಬಂಧದ ನೆಲೆಯನ್ನು ಹುಡುಕುವ ಉದ್ದೇಶದಿಂದ ಮಾನಸ ಈ ಸಂವಾದವನ್ನು ನಡೆಸುತ್ತಿದೆ.

*-ಸಂಪದಾಕೀಯ ಮಂಡಲಿ*

# "ವಿವಾಹ ಮಹಿಳೆಗೆ ಭದ್ರತೆಯನ್ನೊದಗಿಸುವುದೇ?"

*ಮಹಿಳಾ ಚಳುವಳಿ ತನ್ನೆಲ್ಲ ಹರವುಗಳನ್ನು ಸಾಂಸ್ಕೃತಿಕ, ಸಾಮಾಜಿಕ, ರಾಜಕೀಯ ಕ್ಷೇತ್ರದಲ್ಲಿ ಬೀರಿದ್ದಾಗಲೂ ಸಹ ಮಹಿಳೆಯರ ಮೇಲೆ ನಡೆಯುತ್ತಿರುವ ಹಿಂಸಾಚಾರ ಹೆಚ್ಚಾಗುತ್ತಿದೆ. ಅದರ ಸ್ವರೂಪ ಕ್ರೂರವಾಗ ತೊಡಗಿದೆ. ಪ್ರತಿ ನಿತ್ಯದ ಗೋಳಾಗುತ್ತಿರುವ ಹಿಂಸಾಚಾರದ ಬಗ್ಗೆ ಸ್ಪಂದನೆಗಳು ಕಡಿಮೆಯಾಗ ತೊಡಗಿವೆ. ಇದು ಬದುಕಿನ ಭಾಗ ಎನ್ನುವ ರೀತಿ ಕಂಡುಬರುತ್ತವೆ. ಕೌಟುಂಬಿಕ ಹಿಂಸಾಚಾರ ಇದಕ್ಕೆ ಹೊರತಾಗಿಲ್ಲ. ಈ ಸಂದರ್ಭದಲ್ಲಿ 'ವಿವಾಹ ಮಹಿಳೆಗೆ ಭದ್ರತೆ ಒದಗಿಸುತ್ತಿದೆಯೇ?' ಎಂಬ ಪ್ರಶ್ನೆ ನಮ್ಮೆಲ್ಲರನ್ನೂ ಗಾಢವಾಗಿ ಕಾಡತೊಡಗಿದೆ. ಈ ಹಂತದಲ್ಲಿ ಓದುಗರ ಅಭಿಪ್ರಾಯ ಸಂಗ್ರಹಣೆಗಾಗಿ ಹಲವರನ್ನು ಈ ಬಗ್ಗೆ ಬರೆದು ಕೊಡುವಂತೆ ಕೇಳಿಕೊಂಡಿದ್ದೆವು. ಅವರೆಲ್ಲರ ಅಭಿಪ್ರಾಯಗಳನ್ನು ಇಲ್ಲಿ ಪ್ರಕಟಿಸಿದ್ದೇವೆ. ಈ ಕುರಿತಾದ ನಿಮ್ಮ ಪರ-ವಿರೋಧ ಪ್ರತಿಕ್ರಿಯೆಗಳನ್ನು 'ಮಾನಸ' ಆಹ್ವಾನಿಸುತ್ತಿದೆ.*

● **ಮೊಟ್ಟ** ಮೊದಲಿಗೆ ಭದ್ರತೆ ಎಂದರೇನು? ಎಂಬ ಪ್ರಶ್ನೆ ನನಗೆ ನಾನೇ ಹಾಕಿಕೊಂಡರೆ ಆಸರೆ, ರಕ್ಷಣೆ ಅಥವಾ ನೆಮ್ಮದಿ ನೀಡುವ ತಾಣ ಎನ್ನಬಹುದೇನೋ. ಆದರೆ ಈ ಭದ್ರತೆ ಮಾನಸಿಕ, ದೈಹಿಕ, ಆರ್ಥಿಕ, ಕೌಟುಂಬಿಕ ಭದ್ರತೆ ಎಂಬುದಾಗಿ ವಿಭಾಗಿಸಿ ನೋಡಿದಾಗ ಮಾತ್ರ ಆ ಭದ್ರತೆಯ ವಿಸ್ತಾರ ಅರ್ಥವಾಗುತ್ತದೆ.

ಅನಾದಿ ಕಾಲದಿಂದಲೂ ಮಹಿಳೆಯನ್ನು ದ್ವಿತೀಯ ದರ್ಜೆ ಪ್ರಜೆಯಾಗಿ ನೋಡುತ್ತ ಬರುತ್ತಿರುವುದನ್ನು ಕಾಣಬಹುದು. ಚಿಕ್ಕವಯಸ್ಸಿನಲ್ಲಿ ತಂದೆ-ತಾಯಿಯ ಕೈಯಲ್ಲಿ ನಂತರ ಪತಿಯು, ಮುಪ್ಪಿಗೆ ಮಕ್ಕಳು ಎಂಬ ಒಂದು ಗೆರೆಯನ್ನು ಸ್ಪಷ್ಟವಾಗಿ ಹಾಕುತ್ತಾ ಬಂದಿದ್ದಾರೆ. ವಿವಾಹ ಮಹಿಳೆಯು ಏರಲೇಬೇಕಾದ ಮೆಟ್ಟಿಲು, ಪುರುಷನಿಲ್ಲದ ಸ್ತ್ರೀ ಜೀವನ ನಶ್ವರ, ಎಂಬ ಕಲ್ಪನೆಯ ಚಿತ್ರಣ ಸಹಜವಾಗಿ ಸ್ತ್ರೀ ತಾನೇತಾನಾಗಿ ಬದುಕಬಲ್ಲಳೆಂಬ ಛಾತಿ ತೋರಲು ಬಿಡಲಾರದಂತೆ ಕಟ್ಟು ಪಾಡುಗಳ ಸಂಕೋಲೆಯೊಳಗೆ ಬಂಧಿಸುತ್ತಾ ಹೋಗುತ್ತದೆ. ಆ ಸ್ಪಷ್ಟ ಕಲ್ಪನೆಯನ್ನು ಇಂದಿನ ಮಾಧ್ಯಮಗಳೂ ಕೂಡ ವೈಭವೀಕರಿಸುತ್ತ ತೋರಿಸುತ್ತಿರುವುದು ವಿಪರ್ಯಾಸವಲ್ಲದೆ ಮತ್ತೇನು?

ವಿವಾಹವಾಯಿತು ಎಂದಾದ ಮೇಲೆ ಆಕೆ ತಾನು ಬೆಳೆದ ವಾತಾವರಣದಿಂದ ಸಂಪೂರ್ಣ ಭಿನ್ನವಾದ ಪರಿಸರದಲ್ಲಿ ತನ್ನನ್ನು ತಾನು ತೊಡಗಿಸುಕೊಳ್ಳುವ ಕ್ರಿಯೆ ಇಡೀ ಸೃಷ್ಟಿ ವೈಚಿತ್ರ್ಯವೇ ಸರಿ! ಪತಿ, ಪತಿಯ ಮನೆಯವರನ್ನು ತನ್ನ ಮನೆಯೆಂಬಂತೆ ಭಾವಿಸಿ ತನ್ನ ಅಸ್ತಿತ್ವ ತೋರಲು ಹೆಣಗಾಡುತ್ತಾ ಸಾಗುತ್ತಾಳೆ. ಇಲ್ಲಿ ಗಂಡ-ಅತ್ತೆ-ಮಾವ-ನಾದಿನಿ, ಮೈದುನರು ಒಳ್ಳೆಯವರಾದರೇನೋ ಸರಿ, ಇಲ್ಲವಾದಲ್ಲಿ ಆಕೆಯ ಬದುಕೇ ಅಸಹನೀಯವಾಗುತ್ತದೆ.

ವಿವಾಹ ಮಹಿಳೆಗೆ ಮಾನಸಿಕ ಭದ್ರತೆ ನೀಡುತ್ತದೆಯೇ ಎಂದಾಗ ಪತಿ ಆಕೆಯ ಮನಸ್ಥಿತಿ ಅರ್ಥ ಮಾಡಿಕೊಳ್ಳುವ ಜನನಾಗಿದ್ದಾಗ ಮಾತ್ರ ಮಾನಸಿಕ ಭದ್ರತೆ ಸಾಧ್ಯ.

ವಿವಾಹದ ನಂತರ ಪ್ರತಿಯೋರ್ವ ಹೆಣ್ಣು ತನ್ನ ಗಂಡನೇ ಸರ್ವಸ್ವ ಎಂಬ ಭ್ರಮೆಯಲ್ಲಿ ತೊಳಲಾಡುವಂತಹ ಮಾನಸಿಕ ಸ್ಥಿತಿಗೆ ತನ್ನನ್ನು ತಾನು ದೂಡಿಕೊಂಡಿರುತ್ತಾಳೆ. ಹಾಗಾಗಿ ಪತಿ ಆಕೆಗೆ ಮಾನಸಿಕ ಭದ್ರತೆ ಒದಗಿಸುತ್ತಾನೋ ಇಲ್ಲವೋ ಆಕೆಯಂತು ಆ ಮಾನಸಿಕ ಭದ್ರತೆ ತನಗಿದೆ ಎಂಬ ಆದರ್ಶದೊಂದಿಗೆ ಜೀವನ ಸಾಗಿಸುತ್ತಾಳೆ.

ಇನ್ನು ದೈಹಿಕ ಭದ್ರತೆಗೆ ಬಂದಾಗ ವಿವಾಹ ಅಧಿಕೃತವಾಗಿ ಹೆಣ್ಣು-ಗಂಡಿನ ಮಿಲನಕ್ಕೆ ಅನುವು ಮಾಡಿಕೊಟ್ಟಿರುವ ಅಧಿಕೃತ ಸಂಸ್ಥೆ. ಆದ್ದರಿಂದ ಕೇವಲ Sex ಒಂದೆ ವಿವಾಹದ ಪರಮೋಚ್ಛ ಗುರಿಯಲ್ಲ. ಇಲ್ಲಿ ದೈಹಿಕ ಭದ್ರತೆ ಹೆಣ್ಣಿಗೆ ಪತಿ ಒದಗಿಸುತ್ತಾ ಹೋಗುತ್ತಾನೆ, ಆತ ಒಳ್ಳೆಯ ಗಂಡನಾಗಿದ್ದ ಪಕ್ಷದಲ್ಲಿ. ಅತ್ತೆ-ನಾದಿನಿಯರ ಚುಚ್ಚು ಮಾತುಗಳು, ಬೈಗುಳಗಳು, ಮನೆಯ ಕೆಲಸಗಳೆಲ್ಲವನ್ನೂ, ಮಕ್ಕಳ ಪಾಲನೆಯನ್ನೂ ಸಹಿಸಿಕೊಳ್ಳುವ ಸಹನಾ ಶಕ್ತಿಯೊಂದಿಗೆ ಗಂಡನ ಒಂದು ಸಾಂತ್ವನದ ತಬ್ಬುವಿಕೆ ಆಕೆಯ ಎಲ್ಲಾ ಕಷ್ಟಗಳನ್ನೂ, ದೂರಕ್ಕೊಯ್ಯುವ ಕ್ರಿಯೆ ಯಾಗುತ್ತದೆ. ಹೀಗೆ ಮಾತಿನ ಮಾನಸಿಕ ಭದ್ರತೆಯೊಂದಿಗೆ, ದೈಹಿಕ ಭದ್ರತೆಯನ್ನು ವಿವಾಹ ನೀಡುತ್ತದೆ.

ಆರ್ಥಿಕ ಭದ್ರತೆಯ ಪ್ರಶ್ನೆ ಬಂದಾಗ ವಿವಾಹ ಖಂಡಿತಾ ಭದ್ರತೆ ನೀಡುವುದಿಲ್ಲ. ಪ್ರತಿನಿತ್ಯದ ವರದಕ್ಷಿಣೆ ಬಲಿಗಳಿಗೆಲ್ಲ ಹಣವೊಂದೇ ಪ್ರಮುಖ ಕಾರಣವಾಗುತ್ತಾ ಸಾಗುತ್ತಿದೆ. ಗಂಡನ ಪ್ರತಿಕಾರ್ಯದಲ್ಲೂ ಹೆಂಡತಿಯ ಸಹಕಾರ ಖಂಡಿತ ಬೇಕೆನ್ನುವ ಗಂಡಸು ಹಣಕಾಸಿನ ವಿಷಯ ಬಂದಾಗ "ನಿನಗೇನು ತಿಳಿಯುವುದಿಲ್ಲ ಸುಮ್ಮನಿರು" ಎಂಬ ಮಾತಿನೊಂದಿಗೆ ದೂರವಿರಿಸುತ್ತಾ ಹೋಗುತ್ತಾನೆ. ಪ್ರತಿಯೊಂದಕ್ಕೂ ಆಕೆ ತನ್ನ ಬಳಿ ಕೈ ಚಾಚಿ ನಿಲ್ಲಬೇಕೆಂಬ ಅದಮ್ಯ ಸುಪ್ತ ಬಯಕೆ ಪ್ರತಿಯೋರ್ವ ಗಂಡಸಿನಲ್ಲೂ ಇರುತ್ತದೆ. ದುಡಿಯುವ ಮಹಿಳೆ

ಯಾದರೂ ಆಕೆಗೆ ಆರ್ಥಿಕ ಸ್ವಾತಂತ್ರ್ಯವಿದೆಯೇ? ನನಗಂತೂ ಹಾಗೇ ಅನಿಸುವುದಿಲ್ಲ. ಆಕೆಯ ಹಣ ಜೀವನದ ನದಿ ಸಾಗಿಸುವ ದೋಣಿಗೆ ಕಾಣಿಕೆಯಾಗುತ್ತಾ ಹೋಗುತ್ತದೆಯೇ ವಿನಹ, ಮತ್ತೇನನ್ನು ಸಾಧಿಸುತ್ತಾಳೆ ಎನಿಸುವುದಿಲ್ಲ.

ಒಂದು ವಿವಾಹ ಮಹಿಳೆಗೆ ಭದ್ರತೆಯನ್ನು ನೀಡುತ್ತದೆ ಎಂದಾಗ ಇದು ಪತಿ ಒಳ್ಳೆಯವನಾಗಿದ್ದು, ಆಕೆಯ ಅಸ್ತಿತ್ವವನ್ನು ಮನಗಂಡಾಗ ಮಾತ್ರ ಸಾಧ್ಯ. ಆದರೆ ಎಷ್ಟು ಗಂಡಂದಿರು ಆ ರೀತಿ ಇರುತ್ತಾರೆ? ಪ್ರತಿನಿತ್ಯ ವಿವಾಹ ವಿಚ್ಛೇದನ, ವರದಕ್ಷಿಣೆ ಬಲಿ, ಸಂಶಯಕ್ಕಾಗಿ ಹೆಂಡತಿ-ಪ್ರಿಯಕರನ ಕೊಲೆ, ಬಡತನದ ಬೇಗೆಯಲ್ಲಿ ಮಕ್ಕಳೊಂದಿಗೆ ಆತ್ಮಹತ್ಯೆ, ಅತ್ತೆ ನಾದಿನಿಯರ ಕಾಟ ತಾಳದೆ ಸತ್ತ ಹೆಣ್ಣು ಮಕ್ಕಳು ಈ ಎಲ್ಲಾ ಸುದ್ದಿಗಳನ್ನು ಓದುತ್ತಾ ಇದ್ದಾಗ "ಮದುವೆಯೊಂದೇ ಸರ್ವಸ್ವ ಅಥವಾ ಕೊನೆ" ಎಂಬ ಭ್ರಮೆ ತಂದೆ-ತಾಯಿಗಳಿಗೇಕೆ? ಎಂಬ ಪ್ರಶ್ನೆ ಉದ್ಭವಿಸುತ್ತದೆ. ಇದು 21ನೇ ಶತಮಾನಕ್ಕೂ ಮುಂದುವರೆಯುತ್ತಲೇ ಸಾಗುತ್ತಿರುತ್ತದೆ....ನಿರಂತರ...

■ *ಎಸ್. ಪಿ. ಪದ್ಮಿನಿ ನಾಗರಾಜು, ಬೆಂಗಳೂರು*

● ನಮ್ಮ ಸಾಮಾಜಿಕ ಕುಟುಂಬ ರಚನೆಯಲ್ಲಿ ಈ ಹೇಳಿಕೆಯು 'ಸತ್ಯ' ಎಂದೇ ಬಿಂಬಿಸಲಾಗುತ್ತಿದೆ. ಆದರೆ ಇದು ಖಂಡಿತಾ 'ಸುಳ್ಳು'. ಅನಾದಿ ಕಾಲದಿಂದಲೂ ಹೆಣ್ಣಿಗೆ ಗಂಡೇ ರಕ್ಷಕ ಎಂಬುದನ್ನು ನಮ್ಮ 'ಆರ್ಯೋಕ್ತಿ' ಹೇಳುತ್ತಲೇ ಬಂದಿದೆ. ಹೆಣ್ಣು ಬಾಲ್ಯದಲ್ಲಿ ತಂದೆಯ ರಕ್ಷಣೆಯಲ್ಲಿ, ಯೌವನದಲ್ಲಿ ಗಂಡನ ಆಶ್ರಯದಲ್ಲಿ, ವೃದ್ಧಾಪ್ಯದಲ್ಲಿ ಮಗನ ಆಸರೆಯಲ್ಲಿ ಇರಬೇಕೆಂಬ 'ಅಲಿಖಿತ ಶಾಸನ' ಜಾರಿಯಲ್ಲಿದೆ.

ಪುರುಷ ಪ್ರಧಾನ ಸಮಾಜದಲ್ಲಿ ಹೆಣ್ಣಿಗೆ ವಿದ್ಯೆ, ಉದ್ಯೋಗಕ್ಕಿಂತಲೂ 'ಮದುವೆ'ಯೇ ಅನಿವಾರ್ಯ ಎಂಬುದನ್ನು ಆಕೆಗೆ ಬಾಲ್ಯದಿಂದಲೇ ತರಬೇತಿ ನೀಡಲಾಗುತ್ತದೆ.

'ವಿಧೇಯತೆ' 'ವಿನಯಶೀಲತೆ,' 'ತ್ಯಾಗ' 'ಕ್ಷಮೆ' 'ಸಂಯಮ' 'ತಾಳ್ಮೆ'ಯೆಂಬ 'ಪ್ರತಿಭಟನಾರಹಿತ' ಮೌಲ್ಯಗಳನ್ನು ಆಕೆಯಲ್ಲಿ ಬಿತ್ತಿರುವ ಫಲಿತಾಂಶವಾಗಿ ಇಂದು ಅನೇಕ ಮಹಿಳೆಯರು 'ವಿವಾಹ ಸಂಸ್ಥೆ'ಯಡಿಯಲ್ಲಿ 'ವಧುದಹನ' 'ವರದಕ್ಷಿಣೆ ಸಾವು' 'ಆತ್ಮಹತ್ಯೆ' 'ಅಸಹಜ ಸಾವು'ಗಳಿಗೆ ಈಡಾಗುತ್ತಿರುವರು. ಪವಿತ್ರವಾದ 'ವಿವಾಹ ಒಪ್ಪಂದ'ವೆಂಬುದು ಇಂದು 'ವಿವಾಹ ಬಂಧನ'ವಾಗಿ ಮಾರ್ಪಟ್ಟಿದೆ. ಪ್ರಾಚೀನ ಕಾಲದಲ್ಲಿ 'ವಧುದಕ್ಷಿಣೆ' ನೀಡಿ ಗೌರವಯುತವಾಗಿ ಹೆಣ್ಣುಗಳನ್ನು ಕರೆತರುತ್ತಿದ್ದದ್ದು. ಇಂದು ಅತಿ ದುರಾಶೆಯ 'ವರದಕ್ಷಿಣೆ'ಯಾಗಿ ಮಾರ್ಪಾಡಾಗಿದೆ. ವಿವಾಹದ ನಂತರವೂ ಇದು ತನ್ನ ಕರಾಳ ಹಸ್ತವನ್ನು ಚಾಚಿ, ಹೆಣ್ಣಿನ ಬದುಕನ್ನು ನರಕವನ್ನಾಗಿಸುತ್ತಿದೆ.

ಬಹುತೇಕ ಕುಟುಂಬಗಳಲ್ಲಿ ಹೆಣ್ಣು ಮಕ್ಕಳನ್ನು 'ಮದುವೆ' ಮಾಡಿ ಕಳುಹಿಸುವುದಕ್ಕಾಗಿಯೇ ಎಂಬಂತೆ ಬೆಳೆಸುವುದರಿಂದ, ಆಕೆ ವಿದ್ಯಾಭ್ಯಾಸದಿಂದ ತಾಂತ್ರಿಕ ಕೌಶಲ್ಯ, ವೃತ್ತಿ ತರಬೇತಿಗಳ ಮೂಲಕ ಉದ್ಯೋಗ ಪಡೆಯುವುದರಿಂದ ವಂಚಿತಳಾಗುತ್ತಾಳೆ.

ಆಕೆಯ ಪಾಲಿಗೆ ಮದುವೆಯೆಂಬ 'ಸುಂದರ ಸ್ವಪ್ನ'ವು ಪತಿಯ ಮನೆಗೆ ಬಂದ ಕೆಲವೇ ದಿನಗಳಲ್ಲಿ 'ನೀರಗುಳ್ಳೆ'ಯಾಗುವುದು. ವರದಕ್ಷಿಣೆ ಪೀಡನೆಯಿಂದ ಅಸಂಖ್ಯಾತ ಮಹಿಳೆಯರ ಬಾಳು ಸಾವಿನಲ್ಲಿ ಕೊನೆಗೊಂಡಿದೆ.

ಹೀಗಿದ್ದೂ ಆಕೆ ಇದರ ವಿರುದ್ಧ ಹೋರಾಡಿ ನಿಲ್ಲಬೇಕಾದರೆ, ಆಕೆಗೆ ಆರ್ಥಿಕ ಸ್ವಾವಲಂಬನೆ, ತವರಿನ ಬೆಂಬಲ, ಹೋರಾಟದ ಛಲ, ಸ್ವಯಂಸೇವಾ ಸಂಸ್ಥೆಗಳ ಸಹಕಾರದ ಅಗತ್ಯವಿರಬೇಕಾಗುತ್ತದೆ. ಇದು ಎಷ್ಟು ಜನ ಹತಭಾಗಿನಿ ಹೆಣ್ಣು ಮಕ್ಕಳಿಗಿದೆ? ಇದ್ದರೂ ಕೇವಲ ಬೆರಣಿಕೆಯಷ್ಟು ಮಾತ್ರ.

ಹಾಗಿದ್ದರೆ ಉದ್ಯೋಗಸ್ಥ ವಿವಾಹಿತ ಸ್ತ್ರೀ ಪತಿಯ ಮನೆಯಲ್ಲಿ ಸಂತುಷ್ಟವಾಗಿಲ್ಲವೇ ಎನ್ನಬಹುದು. ಇದು ಭಾಗಶಃ ಸತ್ಯವಷ್ಟೇ! ಇಲ್ಲಿಯೂ ಆಕೆ ಶೋಷಿತಳೇ. ಆದರೆ ಇಲ್ಲಿ ಸನ್ನಿವೇಶ, ಸಂದರ್ಭಗಳು ಬೇರೆಯಾಗಿವೆ. ಉದ್ಯೋಗಸ್ಥ ಮಹಿಳೆ ತನ್ನ ಸಂಪಾದನೆಯನ್ನು ಪತಿಯ ಅಥವಾ ಪತಿಯ ಮನೆಯವರ ಕೈಗೆ ನೀಡುತ್ತಿರುವ ಅನೇಕ ಉದಾಹರಣೆಗಳು ನಮ್ಮ ಮುಂದಿವೆ.

ಮನೆಯ ಒಳಗಿನ, ಹೊರಗಿನ ದುಡಿತ ಆಕೆಯದೇ ಆಗಿದ್ದು, ಮಕ್ಕಳ ಕುಟುಂಬದ ಎಲ್ಲಾ ಸದಸ್ಯರ ಸೇವೆ ಕೂಡ ಆಕೆಗೆ ಕಟ್ಟಿಟ್ಟ ಬುತ್ತಿಯಾಗಿರುತ್ತದೆ.

ಉದ್ಯೋಗಸ್ಥ ಮಹಿಳೆ, ಉದ್ಯೋಗದ ನಿಮಿತ್ತ ಬಡ್ತಿ, ವರ್ಗಾವಣೆಗೆಂದು ಪರಸ್ಥಳಗಳಿಗೆ ಹೋಗುವಂತಿಲ್ಲ. ತನ್ನ 'ಕುಟುಂಬ ಸ್ವಾಸ್ಥ್ಯ'ದ ಕಾರಣಕ್ಕಾಗಿ. ಇದರಲ್ಲಿ ಪುರುಷರ ಸ್ವಾರ್ಥ ಅಡಗಿದೆ. ಆಕೆಗೆ ಇಲ್ಲಿಯೂ 'ಸಂಕೋಲೆಯ ಸರಪಳಿ.'

ಅಂದು ಗೋಷ್ಠಿ ಮುಗಿಸಿ
ಮನೆಗೆ ಹೊರಟಾಗ ಕಾದಿತ್ತು ಕೆನ್ನಾಲಿಗೆ
ಏಕೆ ಬೇಕಿತ್ತು? ನಿನಗಿದೆಲ್ಲ!
ಗಂಡ-ಮನೆ-ಮಕ್ಕಳು ಸುಂದರ ಸಂಸಾರ!

ಅದನ್ನೇ ಹಾಡಿ ಹೊಗಳಿ, ಅದರಲ್ಲಿಯೇ ಮುಳುಗಿರಬಹುದಿತ್ತಲ್ಲ?

ಸಾಕೆ ಇದಿಷ್ಟೇ ಹೆಣ್ಣಿಗೆ?
ಅವಳಲ್ಲರಳುತ್ತಿರುವ ಹೊಸ ಅಭಿವ್ಯಕ್ತಿಗೆ
ಮಾರ್ಗ ಯಾವುದು?
ಶತ ಶತಮಾನಗಳಿಂದ ಬಿದ್ದಿರುವ ಈ ಸಂಕೋಲೆ!
ಅದರಲ್ಲಿ ಎಷ್ಟು ನವಕುಸುಮಗಳು ಕರಕಾಗಿ ಹೋದವೋ!
ಲೆಕ್ಕವಿಟ್ಟವರೆಷ್ಟು?
ಹೇಳುವವರಾರು?
ಇಂದು ನೀ ವಿದ್ಯೆ ಕಲಿತ ಮಾತ್ರದಿಂದಲೇ
ಸರ್ವ ಸ್ವತಂತ್ರಳಲ್ಲ!
ಅಜ್ಜಿ, ಅಮ್ಮಂದಿರು ಹೆಣ್ಣಾಗಿ ಹುಟ್ಟಿದ್ದಕ್ಕೆ
ಪಾಡು ಪಟ್ಟಿದ್ದನ್ನು ಕಂಡುಂಡವಳು
ಮುಂದಿನ ತಲೆಮಾರಿನ ಚಿಗುರು
ಮಾನವ ಚೇತನಗಳಾಗಲಿ
ಎಂದೇ
ಕೆನ್ನಾಲಿಗೆಯ ಉರಿ ಸಹಿಸಿದಳು

■ *ಸಿ. ಹೇಮಲತಾ*

● ವಿವಾಹವು ಹೆಣ್ಣಿಗೆ ಭದ್ರತೆಯನ್ನು ಕೊಡುತ್ತದೆಯೇ? ಇದುಎಷ್ಟರ ಮಟ್ಟಿಗೆ ನಿಜವೆಂಬುದು ಬೆರಳೆಣಿಸುವಷ್ಟು ಸುಲಭವಾಗಿ ಹೇಳಬಹುದು. ಈ ಮದುವೆ ಹೆಣ್ಣಿಗೆ ಕೇವಲ ಸಾಮಾಜಿಕ ಭದ್ರತೆಯನ್ನು ಮಾತ್ರ ಒದಗಿಸುತ್ತದೆಯೇ ವಿನಃ ಸಂಪೂರ್ಣವಾದ ಭದ್ರತೆಯೇನಲ್ಲ. ಈ ಸಾಮಾಜಿಕ ಭದ್ರತೆಯೆಂದರೇನು? ತಾಳಿಯೆಂಬ ಸುರಕ್ಷಿತವಾದ ಅಸ್ತ್ರವನ್ನು ಹಾಕಿಕೊಂಡು ಹೊರಗೆ ಹೋದರೆ ಅವಳಿಗೆ ಗೌರವ, ಮರ್ಯಾದೆ ಮತ್ತು ಲೈಂಗಿಕ ಕಿರುಕುಳಗಳಿಂದ ಮುಕ್ತಿ ಸಿಗುತ್ತದೆ ಎಂಬುದು ಒಂದು ನಂಬಿಕೆಯಾಗಿತ್ತು, ಆಗಿದೆ. ಆದರೆ ಮದುವೆಯಾದ ನಂತರ ಅವಳಿಗೆ ಎಲ್ಲಾ ರೀತಿಯ ಮರ್ಯಾದೆ ಸಿಗುತ್ತಿದೆಯೇ? ಅವಳು ಹೊರಗಿನವರ ಲೈಂಗಿಕ ಕಿರುಕುಳದಿಂದ ಮುಕ್ತಿಯನ್ನು ಹೊಂದಿದ್ದರೂ. ಆಳುತ್ತಿರುವ, ಆಳುವಂತಹ ಗಂಡನಿಂದ ದಿನನಿತ್ಯ ಅವಳು ಲೈಂಗಿಕ ಕಿರುಕುಳಕ್ಕೆ ಒಳಗಾಗುತ್ತಿರುತ್ತಾಳೆ.

○ ನಮ್ಮ ದಿನ ನಿತ್ಯದ ಪತ್ರಿಕೆಯ ಪುಟಗಳನ್ನು ತಿರುಗಿಸುತ್ತಿದ್ದಂತೆಯೇ ಅಲ್ಲಿ ವರದಕ್ಷಿಣೆಗಾಗಿ ಹೆಂಡತಿಯ ಮೇಲೆ ಸೀಮೆಎಣ್ಣೆ ಸುರಿದು ಕೊಲೆ ಪ್ರಯತ್ನ, ವರದಕ್ಷಿಣೆ ತರುವಂತೆ ಒತ್ತಾಯಿಸಿ ಅತ್ತೆ ಮಾವಂದಿರ ಕಿರುಕುಳ, ಹೆಂಡತಿಯ ಶೀಲ ಶಂಕಿಸಿ ಇರಿದು ಕೊಲೆ, ವರದಕ್ಷಿಣೆ ಕಿರುಕುಳ ತಾಳಲಾರದೆ ಆತ್ಮಹತ್ಯೆ ಮಾಡಿಕೊಂಡ ಮಹಿಳೆ ಇತ್ಯಾದಿ.

○ ಮದುವೆಯ ಮೊದಲು ತನ್ನ ಮನಸ್ಸಿನಲ್ಲಿ ಸುಂದರವಾದ ಕನಸಿನ ಕೋಟೆಯನ್ನು ಕಟ್ಟಿರುತ್ತಾಳೆ. ತಾನು ಮಾಡಬೇಕೆಂದು ಕೊಂಡ ಸಾಧನೆ, ಓದು ಇತ್ಯಾದಿಗಳಿಗೆ ತನ್ನ ತಂದೆ-ತಾಯಿಯ ನಂತರ ಗಂಡ ಬೆನ್ನೆಲುಬಾಗಬೇಕೆಂದು ಬಯಸುವ ಹೆಣ್ಣು ಮದುವೆಯ ನಂತರ ಗಂಡನಿಗಾಗಿ, ಮಕ್ಕಳಿಗಾಗಿ ಆಸೆ-ಆಕಾಂಕ್ಷೆ ಗಳನ್ನೆಲ್ಲ Sacrifice ಮಾಡಿಕೊಂಡು ಕೊನೆಗೆ ನಾಲ್ಕು ಗೋಡೆಗಳ ಮಧ್ಯೆ ಕತ್ತೆಯಂತೆ ದುಡಿದುಕೊಂಡು ಇರಬೇಕಾಗುತ್ತದೆ. ಆದರೂ ಆಕೆಯ ದುಡಿಮೆಗೆ ಯಾವುದೇ ಬೆಲೆ ಇಲ್ಲ. ಮನೆಯಲ್ಲಿ ಆರಾಮವಾಗಿ ಇರುತ್ತಾಳೆ ಎಂದು ಎಲ್ಲರೂ ಮಾತನಾಡಿ ಕೊಳ್ಳುತ್ತಾರೆ.

○ ಮದುವೆಯ ನಂತರ ಗಂಡ ಹೆಂಡತಿಯನ್ನು ತನ್ನಿಂದ ಸುಲಭವಾಗಿ ದೂರ ಮಾಡಲು ವಿವಾಹ ವಿಚ್ಛೇದನವನ್ನು ನೀಡುತ್ತಾನೆ. ಇಲ್ಲಿಯೂ ಅವಳ ಇಷ್ಟ-ಕಷ್ಟಗಳ ಬಗ್ಗೆ ಯಾವುದೇ ಬೆಲೆ ಇರುವುದಿಲ್ಲ.

○ ವಿವಾಹದ ನಂತರ ಗಂಡನ, ಅತ್ತೆ-ಮಾವಂದಿರ ಒಪ್ಪಿಗೆಯಿಲ್ಲದೆ ಎಲ್ಲಿಯೂ ಹೋಗುವಂತಿಲ್ಲ, ಸ್ನೇಹಿತರನ್ನು ಮನೆಗೆ ಕರೆದುಕೊಂಡು ಬಂದು ಒಂದು ದಿನದ ಮಟ್ಟಿಗೆ ಉಳಿಸಿಕೊಳ್ಳುವಂತಿಲ್ಲ. ಹೊರಗಡೆ ಎಲ್ಲಾದರೂ ಹಳೇ ಕ್ಲಾಸ್‌ಮೇಟ್ ಹುಡುಗರು ಸಿಕ್ಕರೆ, ರಸ್ತೆಯಲ್ಲಿ ನಿಂತು ಮಾತನಾಡಿದ ವಿಷಯ ಏನಾದರೂ ಗಂಡನ ಕಿವಿಗೆ ಬಿತ್ತೆಂದರೆ ಸಾಕು ಮನೆಯಲ್ಲಿ ಕುರುಕ್ಷೇತ್ರ ಪ್ರಾರಂಭಿಸುತ್ತಾನೆ. 'ಯಾರೇ ಅದು ಅವನಿಗೆ ನಿನಗೆ ಏನು ಸಂಬಂಧ' ಇತ್ಯಾದಿ ಪ್ರಶ್ನೆಗಳು ಉದ್ಭವಿಸುತ್ತವೆ. ಅದೇ ಅವನು ಬೇರೊಬ್ಬ ಹೆಂಗಸಿನೊಂದಿಗೆ ರೆಸ್ಟೋರೆಂಟ್‌ಗೆ ಹೋದರೂ ಸರಿ, ಅವರಿಬ್ಬರೂ ಕೇವಲ ಸ್ನೇಹಿತರು ಮಾತ್ರ ಆಗಿರುತ್ತಾರೆ.

ಒಂದು ಹೆಣ್ಣು ವಿವಾಹದ ನಂತರ ಲೈಂಗಿಕವಾಗಿಯಾಗಲೀ ತನ್ನ ಮಕ್ಕಳ ಬಗ್ಗೆಯಾಗಲೀ ಯಾವುದೇ ಸ್ವಂತ ನಿರ್ಣಯಗಳನ್ನು ತೆಗೆದುಕೊಳ್ಳುವಂತಿರುವುದಿಲ್ಲ.

ಈ ಮೇಲ್ಕಂಡ ಎಲ್ಲಾ ಅಂಶಗಳನ್ನು ಗಮನಿಸಿದರೆ ಮದುವೆ ಹೆಣ್ಣಿಗೆ ಭದ್ರತೆ ನೀಡುತ್ತದೆ ಎಂಬುದು ಮರೀಚಿಕೆಯಾಗಿದೆ. ಅದು ಪುರುಷ ಪ್ರಧಾನ ಸಮಾಜದಲ್ಲಿ ಹೆಣ್ಣನ್ನು ತನ್ನ ಹಿಡಿತದಲ್ಲಿ ಇಟ್ಟುಕೊಳ್ಳುವುದಕ್ಕೆ ಹೆಣೆದುಕೊಂಡಿರುವ ಒಂದು ಭದ್ರವಾದ ಕೋಟೆಯಾಗಿದೆ.

ಹಾಗಾದರೆ ಹೆಣ್ಣಿಗೆ ಭದ್ರತೆಯನ್ನು ಕೊಡುವುದು ಯಾವುದು? ಅಥವಾ ಅವಳಿಗೆ ಭದ್ರತೆ ಕೊಡುವ ಯಾವುದೇ ದಾರಿ ಇಲ್ಲವೆ? ಎಂದರೆ, ಖಂಡಿತ ಇದೆ. ಅದು ಅವಳ ಓದು, ಕೆಲಸದ ಭದ್ರತೆ

ಅವಳಿಗೆ ಆತ್ಮಗೌರವ, ಸ್ವಾಭಿಮಾನ, ಸ್ವಾವಲಂಬನೆ ಇತ್ಯಾದಿ ಕೊಡುತ್ತದೆ. ಆದ್ದರಿಂದ ಮದುವೆಯು ಹೆಣ್ಣಿಗೆ ಭದ್ರತೆಯನ್ನು ಕೊಡುವುದಕ್ಕಿಂತ ಹೆಚ್ಚಾಗಿ ಅವಳ ಸ್ವಾತಂತ್ರ್ಯ, ಸ್ವಾಭಿಮಾನದ ಬದುಕಿಗೆ ಅಡ್ಡಿಯಾಗುತ್ತದೆ.

■ *ಲಕ್ಷ್ಮಿ. ಎ.*

● ಇಪ್ಪತ್ತೊಂದನೇ ಶತಮಾನದ ಹೆಣ್ಣು ಎಷ್ಟೇ ವಿದ್ಯಾವಂತಳಾದರೂ ಕೂಡ ವಿವಾಹದ ನಂತರ ಮುಗ್ಧಳಾಗಿಯೇ ಉಳಿದು ಮಾನಸಿಕವಾಗಿ ದೈಹಿಕವಾಗಿ ಹಿಂಸೆಗೆ ಒಳಗಾಗುತ್ತಾಳೆ, ಏಕೆ? ಈ ಪ್ರಶ್ನೆ, ಪ್ರಶ್ನೆಯಾಗಿಯೆ ಉಳಿಯುತ್ತದೆ. ಹೆಣ್ಣು ಹುಟ್ಟಿದರೆ ಆಕೆ ಎಂದಾದರೊಂದು ದಿನ ಗಂಡನ ಮನೆ ಸೇರುವವಳು. ಹುಟ್ಟಿದ ಮನೆ ಮೆಟ್ಟಿದ ಮನೆಗೆ ಕೀರ್ತಿ ತರುವ ಲಕ್ಷ್ಮಿ ಎಂದುಕೊಂಡು ವರದಕ್ಷಿಣೆ ಎಂಬ ಭೂತಕ್ಕೆ ಬಲಿಕೊಡುವುದು ಸರ್ವೇ ಸಾಮಾನ್ಯವಾಗಿದೆ. ವಿವಾಹ ಒಂದು ರೀತಿಯಲ್ಲಿ ಗಂಡಿನ ದಾಹಕ್ಕೆ ಆತನ ವಯಸ್ಸಾದ ತಂದೆ ತಾಯಿ ಅಥವಾ ಕುಟುಂಬಕ್ಕೆ ದುಡಿಯುವ ಆಳು ಎಂಬ ಭಾವನೆ ಬೆಳೆದುಬಂದಿದೆ.

ತನ್ನ ತವರುಮನೆಯಿಂದ ಹಣ, ಆಸ್ತಿ, ಒಡವೆ, ಎಷ್ಟು ತರುವಳೋ ಅಷ್ಟೇ ತೂಕವಾಗಿ ಅವಳಿಗೆ ಭದ್ರತೆ ನೀಡಲಾಗುತ್ತಿದೆ ಎಂಬುದು ನನ್ನ ಅಭಿಪ್ರಾಯ. ದಿನ ಪತ್ರಿಕೆಯ ಕಾಲಂ ನೋಡಿ ನೆರಮನೆಯ ಪುಟ್ಟಜ್ಜಿಯ ಸೊಸೆ ನೀಲಮ್ಮ, "ಅದ್ಯಾಕಾದರೂ ಮದುವೆ ಅಂತ ಆಗುತ್ತಾರೋ ಅದೇನ್ ಬರುತ್ತೋ ಇವುಗಳಿಗೆ, ಹೀಗೇ ಮಾಡ್ತಾ ಇರ್ಲಿ, ಹೆಣ್ಣಿಗೆ ಎಷ್ಟು ಕಡೆಗಣಿಸುತ್ತಾರೋ ಅಷ್ಟೇ ಎಕ್ಕಡಾ ಸಮೀಬೇಕು, ಹೆಣ್ಣು ಅಂತ್ ಗೋಗರೀಬೇಕು ಅಳ್‌ಬೇಕು. ಆಗ್ಲೆ ಗೊತ್ತಾಗೋದು ಇವಕ್ಕೆ. ನನಗಂತು ಕೇಳಿ ಕೇಳಿ ಕಿವಿ ತೂತ್ ಬಿದ್ದೋಗಿದೆ. ಏನ್‌ಕಾಲ ಕಲಿಗಾಲವಮ್ಮಾ? ಅದಕ್ಕೆ ನೋಡ್, ಮಳೆ , ಬೆಳೆ ಇಲ್ದೆ ಸಾಯ್ತಾ ಇರೋದು. ರೈತಾಪಿ ಜನ್ರ ಸಾಯ್ತಾವ್ರೆ ಇನ್ನೂ ತಿನ್ನೋದೆಯಾ ಸಾಯಲಿ ಮುಂಡೇವು. ಮುಂದೆ ಏನೇನಾಗುತ್ತೋ ಶಿವನೇ" ಮೂಗೆಳಿಯುತ್ತಾ ದೇವರ ನೆನೆಯುವ ಅವರ ಮನಸ್ಸು ಹೇಗಿರಬೇಕು. ಊಹಿಸಲಸಾಧ್ಯ.

ಹೆಣ್ಣು ಶಕ್ತಿಯಾಗಿ ಆದಿ, ಅಂತ್ಯ ಮೂಲ ಸ್ವರೂಪಳು, ಅವಳ ಹೊರತು ದೇವಾಧಿದೇವತೆಗಳೆ ನಿಸ್ಸಹಾಯಕರು ಎಂಬುದನ್ನು ತೋರಿಸಿಕೊಟ್ಟ ಇತಿಹಾಸ ಸಾಕ್ಷಿಯಾಗಿದೆ. ಮಾಂಗಲ್ಯವೆಂಬ ಬೊಟ್ಟುಕಟ್ಟಿ ಅವಳ ಸರ್ವಸ್ವವನ್ನು ಪಡೆದು, ಅವಳಿಗೇ ಬೆಂಕಿ ಹಚ್ಚಿ ಕೊಲೆ ಮಾಡುವುದರಲ್ಲಿ ಭದ್ರತೆ ಇದೆಯೇ? ಹೆಣ್ಣು ಹೆಣ್ಣಿಗೆ ಶತ್ರುವೆ? ತನ್ನ ವಂಶ ಕುಲಜೆಯಾದ ಹೆಣ್ಣಿಗೆ ಡೈವರ್ಸ್ ಕಾಗದ ಕೈಗಿತ್ತು ನ್ಯಾಯಾಲಯದ ಕಟಕಟೆಯ ತೋರುವ ಗಂಡಿಗೇನು ಶಿಕ್ಷೆ? "ಗಂಡ ಬಿಟ್ಟ ಹೆಣ್ಣು" ಎಂಬ ಹಣೆಪಟ್ಟಿ ಅಂಟಿಸಿಕೊಂಡು ಕುಲವಧು. ಮಕ್ಕಳ ತಾಯಿ, ವಯಸ್ಸಾದವರನ್ನೂ ನ್ಯಾಯಾಲಯದಲ್ಲಿ ನಿಲ್ಲಿಸಿ, ತಮ್ಮ ಗಂಡಂದಿರಿಂದ ಬರಬೇಕಾದ ಜೀವನಾಂಶಕ್ಕೆ ಸೆಣಸಾಡುವ ದೃಶ್ಯ ಮನಮಿಡಿಯುತ್ತದೆ. ಆ ವಯಸ್ಸಿಗೆ ಬೇಕಾದ ಗಂಡನ ಪ್ರೀತಿ, ಭದ್ರತೆ, ಇಲ್ಲದೆ ಇನ್ನಾರದೋ ಮನೆಯ ಆಳಾಗಿ ದುಡಿದು ಮಕ್ಕಳನ್ನು ಸಾಕುವ ದುರಂತ ಕಥೆಗಳು ದಿನಕ್ಕೆ ಸಾವಿರಾರು ಹುಟ್ಟಿಕೊಳ್ಳುತ್ತಿವೆ. ಇದಕ್ಕೆ ಸರಿಸಮ ಹಲವಾರು ಮಹಿಳಾಸಂಘಗಳು ಕಾರ್ಯ ನಿರ್ವಹಿಸುತ್ತಿದ್ದಾಗ್ಯೂ ಹಿಂಸೆಗಳು ನಿಲ್ಲುತ್ತಿಲ್ಲ ಕಾರಣ?

ಮಹಿಳೆ ಸ್ವತಂತ್ರವಾಗಿ ಹಾಡು ಹಗಲೆ ಓಡಾಡಲು ಆಗುತ್ತಿಲ್ಲಾ ಎಂಬ ಸತ್ಯವೇ ವಿಷಾದನೀಯ. ಇನ್ನು ವಿವಾಹವೆಲ್ಲಿ ಬಂತು? ಓರ್ವ ಯಶಸ್ವೀ ಗಂಡಿನ ಹಿಂದೆ ಹೆಣ್ಣು ಸ್ಫೂರ್ತಿದಾಯಕಳು. ಓರ್ವ ಹೆಣ್ಣಿನ ಹಿಂದೆ ಗಂಡು ಸ್ಫೂರ್ತಿದಾಯಕನೆಂದರೆ ಶೇ. ಮೂರು ಎನ್ನಬಹುದು. ಮನೆಯಲ್ಲೂ ಹೊರಗೂ ದುಡಿಯುವ ಹೆಣ್ಣು 100ಕ್ಕೆ 100 ಸರಿಸಮಾನಳು. 33% ಸ್ವತಂತ್ರ ಅಧಿಕಾರ ಉಳಿಸಿಕೊಳ್ಳುವಲ್ಲಿ ಸಾಮರ್ಥ್ಯವನ್ನು ತೋರಿಸಿಕೊಂಡಿದ್ದಾಳೆ. ವಿವಾಹವೆಂದರೆ ಹಣೆ ಬರಹ, ಕರ್ಮ. ಬ್ರಹ್ಮ ಬರೆದ ನಂಟು, ಇವು ನಿತ್ಯ ಕೇಳಿಬರುವ ವಾಕ್ಯ. ವಿವಾಹವೆಂಬ ಪವಿತ್ರ ಬಂಧನ ಉಳಿಸಿಕೊಳ್ಳುವಂತ ಸಾಹಸ 100ಕ್ಕೆ 5 ಭಾಗಕ್ಕೆ ಇಳಿದಿದೆ. ಎಂದರೆ ಇದಕ್ಕೆಲ್ಲಾ ಒಂದೇ ಉತ್ತರ ಅವರಿವರ ಮನೆಯ ದೋಸೆ ತೂತಾದರೆ ತಮ್ಮ ಮನೆ ಹೆಂಚೆ ತೂತು. "ವಿವಾಹ ಮಹಿಳೆಗೆ ಭದ್ರತೆಯ ಬುನಾದಿ. 'ಭದ್ರತೆ'ಯ ಅರ್ಥ ಅರ್ಥವಾಗದೆ ಉಳಿದುಕೊಳ್ಳುತ್ತದೆಯೇ ಹೊರತು ವಿವರಣೆ ಕಷ್ಟಕರ.

■ *ಆರ್. ಹಂಸ, ಬೆಂಗಳೂರು*

● ವಿವಾಹ ಮಹಿಳೆಗೆ ಭದ್ರತೆಯನ್ನು ಒದಗಿಸುತ್ತದೆ ಎಂಬ ಅಭಿಪ್ರಾಯವನ್ನು ಬಹುಜನರು ನಂಬಿದ್ದಾರೆ. ನಂಬಿಸುತ್ತಲೂ ಬರುತ್ತಿದ್ದಾರೆ. ಮೇಲುನೋಟಕ್ಕೆ ಇದು ಸತ್ಯದಂತೆ ಕಾಣುತ್ತದೆ. ಪ್ರಚಲಿತ ಆಚರಣೆ, ಸಂಪ್ರದಾಯ, ನಂಬಿಕೆ ಇವೆಲ್ಲವೂ ಕೂಡ ಮದುವೆ ಭದ್ರತೆಯನ್ನು ನೀಡುತ್ತದೆ ಎಂದು ಒಪ್ಪಿಸುತ್ತವೆ. ಹಾಗೇ ಹೆಣ್ಣಿಗೆ ಮೋಕ್ಷಕ್ಕೆ ಮಾರ್ಗವೆಂದು ನಂಬಿಸುತ್ತವೆ. ಇದಕ್ಕೆ ಧರ್ಮವೂ ಬೆಂಬಲವನ್ನು ಒದಗಿಸುತ್ತದೆ. ಅವಳ ಜೀವನದ ಬಹುಪಾಲು ಘಟನೆಗಳು ಘಟಿಸುವುದು ಮದುವೆಯ ಆನಂತರದಲ್ಲಿ. ಮದುವೆಗೆ ಮುನ್ನ ತಾಯಿಯಾದರೆ ಸಮಾಜದಿಂದ ದೂರವಾಗಬೇಕಾಗುತ್ತದೆ. ಕನ್ಯೆಯಾಗಿಯೇ ಉಳಿದರೆ ಅದಕ್ಕೂ ನೂರು ತಕರಾರುಗಳುಂಟು. ಮದುವೆ ಆಗದ್ದಕ್ಕೆ ಕಾರಣಗಳನ್ನು ನೀಡುವುದಲ್ಲದೆ, ನೋಡುಗರ ದೃಷ್ಟಿಕೋನವೇ ಬದಲಾಗುವುದನ್ನು

ಕಾಣಬಹುದು. ಸ್ವತಃ ನನ್ನ ಅಕ್ಕನಿಗೆ 21 ವರ್ಷಕ್ಕೆ ಮದುವೆ ಯಾಯಿತು. ಅದರೊಳಗೆ ಅವಳು ಹಳ್ಳಿಯಲ್ಲಿ ಪಟ್ಟ ಅಪಮಾನ, ನಿಂದನೆ ಅಷ್ಟಿಷ್ಟಲ್ಲ. ಅವಳಿಗೆ ಬಾಯಿ ಜೋರು, ಅದಕ್ಕೇ ಅವಳಿಗೆ ಅರಿಸಿನ ನೀರು ಬಿದ್ದಿಲ್ಲವೆಂದು ಎದುರಲ್ಲೇ ನಿಂದಿಸಿರುವುದನ್ನು ನಾನೇ ನೋಡಿರುವೆ, ಕೇಳಿರುವೆ. ಮದುವೆ ಆಗದೆ ಉಳಿಯುವ ಆತ್ಮಸ್ಥೈರ್ಯ, ಗಂಡಿನಿಂದ ದೂರ ಉಳಿಯಬೇಕಾಗುವ ಕ್ರಿಯೆ ಒಂದು ರೀತಿಯಲ್ಲಿ ಹೆಣ್ಣಿಗೆ ಭಾರತೀಯ ಸಮಾಜದಲ್ಲಿ ಕಷ್ಟಕರ ವಾಗುತ್ತದೆ. ಓದಿ ತನ್ನ ಜೀವನವನ್ನು ರೂಪಿಸಿಕೊಂಡು-ಕೊಳ್ಳುವ ಹೆಣ್ಣು ಮಕ್ಕಳಿಗೆ ಸಿಗುವ ಸ್ವಾತಂತ್ರ್ಯ ಮನೆಯಲ್ಲೇ ಉಳಿಯುವ ಹೆಣ್ಣುಮಕ್ಕಳಿಗೆ ಇರುವುದಿಲ್ಲ. ಅವರು ಅಲ್ಲಿಯೂ ಅವಲಂಬಿತರಾಗಿಯೇ ಇರುತ್ತಾರೆ. ಈ ದೃಷ್ಟಿಯಲ್ಲಿ ಮದುವೆ ಹೆಣ್ಣಿಗೆ ಅನಿವಾರ್ಯವಾಗಿ ಬಿಟ್ಟಿದೆ. ಹೊರಗೆ ಹೋಗಿ ದುಡಿಯು ತ್ತಿದ್ದಾಗಲೂ ಒಬ್ಬ ಗಂಡಿನ ಹೆಂಡತಿ ಹೌದು ಎಂದು ನೋಡುವ ದೃಷ್ಟಿಗೂ ಒಬ್ಬರ ಮಗಳೆಂದು ನೋಡುವ ದೃಷ್ಟಿಗೂ ಭಿನ್ನ ನೆಲೆಗಳಿರುತ್ತವೆ. ಮದುವೆ ಆದಳೆಂದರೆ ಆಕೆಯನ್ನು ಆಳುವ, ನೋಡುವ ಒಡೆಯನಿದ್ದಾನೆಂದು ಭಾವಿಸಿ ಅವಳ ತಂಟೆಗೆ ಹೋಗದೆ ಇರಬಹುದು; ಬಹುಪಾಲು ಜನ ಇರುತ್ತಾರೆ. ಆದೇ ದೃಷ್ಟಿಯನ್ನು ಮಗಳಾದ ಕಾರಣಕ್ಕಾಗಿ ಜನ ಇಟ್ಟುಕೊಂಡಿರು ವುದಿಲ್ಲ. ಯಾಕೆಂದರೆ ಅಕೆ ಪರನಾರಿಯಲ್ಲ. ಪರನಾರಿ ಎಂದರೆ ಸಮಾಜದ ರೂಢಿ ಪ್ರಕಾರ ಒಬ್ಬನ ಹೆಂಡತಿಯಾದವಳು ಮಾತ್ರ. ತನ್ನ ಹೆಂಡತಿಯನ್ನು ಹೊರತು ಪಡಿಸಿ ಸ್ತ್ರೀಯರೆಲ್ಲಾ ಪರನಾರಿಯರೆಂದು ಗ್ರಹಿಸುವುದಿಲ್ಲ. ಹೀಗಾಗಿ ಮದುವೆಯಾದ ಗಂಡಿನಿಂದ ಹಿಡಿದು ಮದುವೆಯಾಗದವರ ದೃಷ್ಟಿಯಲ್ಲೂ ಮದುವೆ ಇಲ್ಲದ ಕನ್ಯೆಯ ಬಗ್ಗೆ ಕುತೂಹಲವಿರುತ್ತದೆ. ಇದೇ ಅವರ ಮೇಲೆ ಯಾವಾಗ ಬೇಕಾದರೂ ಹಾವಾಗಿ ಕಚ್ಚಬಹುದಾಗಿರುತ್ತದೆ. ಈ ಅರ್ಥದಲ್ಲಿ ಮದುವೆ ಹೆಣ್ಣಿಗೆ ಸ್ವಲ್ಪ ಮಟ್ಟಿನ ಭದ್ರತೆಯನ್ನು ಒದಗಿಸುತ್ತದೆ. ಇಲ್ಲಿಯೂ ಕೇಡುಗಳು ಇಲ್ಲವೆಂದಲ್ಲಾ. ಇಲ್ಲಿನ ಕೇಡು ಸಮಾಜದ್ದಲ್ಲ; ಇದು ಕುಟುಂಬದಲ್ಲೇ ಪರಿಣಮಿಸುವ ಕೇಡು. ಮದುವೆ ಸಾಮಾಜಿಕವಾಗಿ ಭದ್ರತೆಯಾದರೂ ಕುಟುಂಬದಲ್ಲಿ ಒಬ್ಬನ ಹಿಡಿತದಲ್ಲಿದ್ದು ಅವಳ ಜೀವನ ಹೇಗೆ? ಎಲ್ಲಿ? ಯಾವಾಗ ಹಳಿತಪ್ಪಿದ ರೈಲುಗಾಡಿ ಯಂತಾಗುತ್ತದೆ ಎಂದು ಹೇಳಲಾಗದು. ಮನೆ, ಮಕ್ಕಳು ಎಲ್ಲವೂ ಇದ್ದಾಗಲೂ ಅಲ್ಲಿ ತೊಂದರೆ ಬರಬಹುದು ಎನ್ನಲು ಬೇಕಾದಷ್ಟು ಉದಾಹರಣೆಗಳನ್ನು ಕೊಡಬಹುದು.

ಭಾರತದ ಉತ್ತರಕ್ಕೆ ನೂರಕ್ಕೆ 99ರಷ್ಟು ಜನ ಹೆಣ್ಣಿಗೆ ಮದುವೆಯು ಭದ್ರತೆಯನ್ನು ಒದಗಿಸುತ್ತದೆ ಎಂದೇ ಭಾವಿಸಿದ್ದಾರೆ. ಹೆಣ್ಣು ಮುದುಕಿಯಾಗುವವರೆಗೆ ಜೊತೆಯಲ್ಲಿ ಗಂಡಿಲ್ಲದೆ ತಿರುಗುವಂತಿಲ್ಲ. ಒಬ್ಬರೆ ಹೊರಗೆ ಹೋದರೆ ಏನಾದರೂ ಆಗಬಹುದೆಂಬ ಭಯದಲ್ಲೇ ನಿತ್ಯ ಬದುಕುವ ಸ್ಥಿತಿಯಿದೆ. ಇಲ್ಲಿ ದುರ್ಯೋಧನರು ಜಾಸ್ತಿ ಎನ್ನುತ್ತಾರೆ. ಹಳ್ಳಿಯಲ್ಲಿ ಹುಟ್ಟಿ ಬೆಳೆದ ಹೆಣ್ಣು ಮಕ್ಕಳು ತಾವೇ ತಮ್ಮ ಹೊಲಗದ್ದೆಗಳನ್ನು ನೋಡಿರುವುದಿಲ್ಲ. ಹೆಚ್ಚಾಗಿ ಹೊರಗೆ ಬಂದು ನಿಂತು ಬಿಸಿಲಿಗೆ ಮೈ ಒಡ್ಡುವ ಅವಕಾಶವಿಲ್ಲ. ಮನೆಗಳಿಗೆ ಸರಿಯಾಗಿ ಕಿಟಕಿಗಳೂ ಇರುವುದಿಲ್ಲ. ಅಂಥ ಮನೆಯೊಳಗೆ ಗುಂಗಟ್ಟಿನ ಒಳಗೆ ಹೆಣ್ಣು ಇರಬೇಕಾಗಿದೆ. ಇಂಥ ಸ್ಥಿತಿ ಇಪ್ಪತ್ತೊಂದನೆಯ ಶತಮಾನಕ್ಕೆ ನಾವು ಬಂದಿರುವಾಗಲೂ ಇದೆ ಎಂದು ನಂಬಲು ಕಷ್ಟವಾಗಬಹುದು. ಆದರೆ ಇದು ನಂಬಲೇಬೇಕಾದ ವಿಷಯ. ಇಲ್ಲಿನ 60 ವರ್ಷದ ಹೆಣ್ಣೊಬ್ಬಳು ಹೇಳುವಂತೆ "ನಾವು ಉಪವಾಸವಿದ್ದರೂ ಹೊರಗೆ ಹೋಗಿ ದುಡಿದು ತರುವಂತಿಲ್ಲ, ಗಂಡು ತರಬೇಕು, ನಾವು ಉಣ್ಣಬೇಕು. ಅವನು ತರುವುದರೊಳಗೆ ನಾವು ಸತ್ತರೆ ಏನೂ ಮಾಡುವಂತಿಲ್ಲ. ಒಳಗೇ ಅತ್ತು ಅತ್ತು ಸಾಯುತ್ತೇವೆ." ಇಂಥ ಸ್ಥಿತಿಯಲ್ಲಿ ಮದುವೆಯೇ ಭದ್ರತೆಯೆಂದು ನಂಬದೆ ಇರುವುದಾದರೂ ಹೇಗೆ? ಹುಟ್ಟಿಸಿ ಸಾಕಿದ ತಂದೆ ತಾಯಿಗೆ ಎಷ್ಟು ದಿನ ಹೊರೆಯಾಗುವುದು ಎಂದು ಮದುವೆಗೆ ಮುಂದಾದರೆ ಅದೂ ಸುಖವಾಗಿ ನಡೆಯುವುದಿಲ್ಲ. ಅಲ್ಲಿ ಬಡವರಾದರೂ ತಮ್ಮ ಕೈಲಾದ ವರದಕ್ಷಿಣೆ ಕೊಟ್ಟು ಮನೆಗೆ ಪಾತ್ರೆ ಪಡಗ ನೀಡಿ ಮದುವೆ ಮಾಡಿ ಕೊಡಬೇಕು. ಅಲ್ಲಿ ಸುಖವೆಂದರೆ ಮನೆಯನ್ನು ಸಂರಕ್ಷಿಸುವ ಗಂಡನ್ನು ಹೆರುವುದರಲ್ಲಿ ಕಾಣಬೇಕಾಗುತ್ತದೆ. ಅಲ್ಲಿ ಹೆಣ್ಣೇ ಹುಟ್ಟುತ್ತಿದ್ದರೆ ಅಂಥ ಹೆಂಗಸಿನ ಸ್ಥಿತಿ ಕೇಳಲೇ ಬಾರದು... ಗಂಡಾಗುವವರೆಗೆ ತನ್ನ ಬಸುರಿ ಬಾಣಂತನದ ಕಾರ್ಯಯಂತ್ರ ಮುಂದುವರೆಯುತ್ತದೆ. ಅದಕ್ಕಾಗಿ ಮಾಡಬೇಕಾದ ಉಪವಾಸ, ವ್ರತ ಇವುಗಳಿಗೆ ಲೆಕ್ಕವಿಲ್ಲ. ವಾರಕ್ಕೆ ಮೂರು ದಿನಗಳಾದರೂ ಉಪವಾಸದಲ್ಲಿ ಕಳೆಯುವವರೇ ಹೆಚ್ಚು.

ತನ್ನ ಹೆಣ್ಣು ಮಕ್ಕಳ ಭದ್ರತೆಗಾಗಿ ಈ ತಾಯಿ ಗಂಡಿಗಾಗಿ ಕಾಯಬೇಕು. ಇಂಥ ಸ್ಥಿತಿಯಿಂದ ಹೆಣ್ಣೆಂದರೆ ಜೀವ ನಡುಗುವ, ನಿರಾಶಾಭಾವ ತುಂಬಿದ ಭಾವವೇ ಹೆಚ್ಚು. ಅದನ್ನು ನೋಡಿದರೆ ಈ ಸಮಾಜದ ಮೇಲೆ ಸಿಟ್ಟು ಬಂದರೂ, ಅವರ ನಂಬಿಕೆಗಳನ್ನು ಹೋಗಲಾಡಿಸದೆ ಏನೂ ಮಾಡುವಂತಿಲ್ಲ. ಹೆಣ್ಣಿರುವುದೇ ಗಂಡು ಮಕ್ಕಳ ಸಂತಾನ ಕೊಡಲು ಎಂದು ಭಾವಿಸುತ್ತಾರೆ. ಅದೇ ಅವಳ ಜೀವನದ ಶ್ರೇಷ್ಠ ಕೆಲಸವೆಂದು ತಿಳಿದಿದ್ದಾರೆ. ಇದನ್ನು ಹೊರತು ಪಡಿಸಿ ಅವಳ ವ್ಯಕ್ತಿತ್ವವೇ ಇಲ್ಲವೆಂದು ಪರಿಗಣಿಸುವ ಸಮಾಜದಲ್ಲಿ, ಮದುವೆಯೇ ಜೀವನದ ಸರ್ವಸ್ವವಾಗಿರುತ್ತದೆ ಎಂದು ಹೆಣ್ಣು ಭಾವಿಸುವುದರಲ್ಲಿ ಅನ್ಯ ಭಾವನೆ ಬರಲು ಸಾಧ್ಯವಿಲ್ಲ.

ಇಂದಿಗೂ ಭಾರತದಲ್ಲಿ ಸಣ್ಣ ವಯಸ್ಸಿನಲ್ಲೇ ಹೆಣ್ಣಿಗೆ ಮದುವೆ ಮಾಡುವುದನ್ನು ಕಾಣಬಹುದು. ಸರ್ಕಾರ ನಿಗದಿ ಪಡಿಸುವ ವಯಸ್ಸಿಗೆ ಅದನ್ನು ಮೀರಿದ ವಯೋಮಾನಕ್ಕೆ ಮದುವೆ ಮಾಡುವವರ ಸಂಖ್ಯೆ ಬೆರಳೆಣಿಕೆಯಷ್ಟು ಮಾತ್ರ. Teen ageನಲ್ಲೇ ಮದುವೆ ಆಗುವವರ ಸಂಖ್ಯೆ ಹೆಚ್ಚು. ಈ ವಯಸ್ಸು ಕನಸು ಕಾಣುವ ಕಾಲ. ಇದಕ್ಕೆ ಪುಷ್ಟಿ ನೀಡುವಂತೆ ನಮ್ಮ ಸಿನಿಮಾ ಜಗತ್ತು ಅವರ ಕನಸುಗಳಿಗೆ ಓಕುಳಿ ಹಾಕಿ ಗರಿಗೆದರಿಸುತ್ತವೆ. ಮದುವೆ ಎಂದರೆ ಏನೆಂದು ಅರ್ಥ ಮಾಡಿಕೊಳ್ಳುವ ಮುನ್ನ ತಂದೆ-ತಾಯಿಯರ ಒಪ್ಪಿಗೆಗೆ ಕುತ್ತಿಗೆ ನೀಡುತ್ತಾರೆ. ಅನಂತರದಲ್ಲಿ ಅಲ್ಲಿನ ಎಲ್ಲಾ ಕೇಡುಗಳಿಗೆ ಪಾತ್ರಧಾರರಾಗಿ ನಟಿಸುತ್ತಾರೆ. ಸಿಡಿದು ಬಂದು ಮದುವೆಯೊಳಗಿರುವ ಕಷ್ಟಗಳನ್ನು ಯಾರಿಗೂ ತಿಳಿಸುವುದಿಲ್ಲ. ಗಂಡನ ನಿರ್ಧಾರಗಳ ಮೇಲೆ ನಡೆಯುವುದೇ ಹೆಣ್ಣಿನ ಧರ್ಮ ವೆಂದೂ, ದುಡಿಯುವವರಿಗೆ ಇಂಥ ಹಕ್ಕು ಇರುತ್ತದೆ ಎಂದೂ ಭಾವಿಸುವವರು ಮತ್ತು ಬೇಸರವಾದರೂ ಇದು ತಮ್ಮ ಹುಟ್ಟಿನ ಕರ್ಮವೆಂದು ತಿಳಿದು ನೋವುನುಂಗುವವರೇ ಹೆಚ್ಚು. ಮನೆಯ ಕೆಲಸಗಳಿಗೂ ಬೆಲೆಯಿದೆ ಎಂದು ತಿಳಿದವರ ಸಂಖ್ಯೆ ಕಡಿಮೆ.

ಹೆಣ್ಣು ಮಕ್ಕಳು ತಾವು ಸಣ್ಣವರಿರುವಾಗ ತಂದೆಯು ತಾಯಿಯನ್ನು ಹೊಡೆದರೆ, ಅದು ಆತನ ಹಕ್ಕೆಂದು ತಿಳಿಯುತ್ತಾರೆ. ಸ್ವತಃ ನಾನೇ ಸಣ್ಣವಳಿರುವಾಗ ನಮ್ಮ ಮನೆಯ ಸುತ್ತಲಿನ ಗಂಡಸರು ಅವರ ಹೆಂಡತಿಯನ್ನು ಹೊಡೆಯುವಾಗ ಅವರ ಹಕ್ಕೆಂದು ತಿಳಿದಿದ್ದೆ. ನನ್ನ ತಾಯಿ ನಮ್ಮನ್ನು ಹೊಡೆಯುವ ಹಾಗೇ ಗಂಡನಿಗೆ ಹೆಂಡತಿಯ ಮೇಲೆ ಹಕ್ಕಿರುತ್ತದೆ ಎಂದು ಭಾವಿಸಿದ್ದೆ. ಇಂಥ ಭಾವನೆಗೆ ಪರಂಪರೆಯ ರೂಢಿಗಳು ಕಾರಣವಾಗಿರುತ್ತವೆ. ಹೀಗಾಗಿ ವಿವಾಹವೆಂದರೆ ಹೊಡೆತ, ಬೈಗುಳ ಇರುವಂತೆ; ಗಂಡನ ಮನೆಯಲ್ಲಿ ಹಕ್ಕು ಅವನ ಮೇಲೆ ಅಧಿಕಾರ, ತನ್ನದೆನ್ನುವ ಒಡವೆ, ವಸ್ತ್ರ ಮಕ್ಕಳು ಎಲ್ಲವೂ ಇರುತ್ತವೆ ಎಂಬ ಭಾವನೆ ಹೆಣ್ಣಿಗಿರುವುದರಿಂದಲೇ ಅದರ ಬಗ್ಗೆ ಇಂದಿಗೂ ಗುಮಾನಿಯಿಂದ ನೋಡಲು ಸಾಧ್ಯವಾಗಿಲ್ಲ. ಇಷ್ಟಲ್ಲದೆ ಬಹುಪಾಲು ಹೆಣ್ಣು ಮಕ್ಕಳು ಮದುವೆಯ ಅನಂತರದಲ್ಲಿ ತಾವು ಸುಖವಾಗಿ ಇರುವಂತೆಯೇ ಅಲ್ಲಿ ತನಗೆ ಭದ್ರತೆ ಇದೆ ಎಂದೇ ಸಮಾಜದ ಎದುರಲ್ಲಿ ತೋರಿಸುತ್ತಾರೆ. ಈ ವ್ಯವಹಾರದಲ್ಲಿ ಹೆಣ್ಣುಗಂಡಿನಷ್ಟು ಜಾಣಳಲ್ಲವೆನ್ನಿಸುತ್ತದೆ. ಅವಳು ಜಾಣತನ ತೋರಿದರೆ ವ್ಯವಹಾರ ಮುರಿಯುವುದರಲ್ಲಿ ಸಂಶಯವಿಲ್ಲ. ನನ್ನ ಗೆಳತಿಯೊಬ್ಬಳು ಆಕೆಯ ಹೆಸರಿನಲ್ಲಿರುವ ಸೈಟನ್ನು ಗಂಡನ ಹೆಸರಿಗೆ ವರ್ಗಾಯಿಸದ ಕಾರಣವಾಗಿ ಅವರ ಸುಖದಾಂಪತ್ಯ ವಿವಾಹ ವಿಚ್ಛೇದನದ ಕಡೆಗೆ ಹೋಯಿತು. ಅಂದರೆ 'ಸುಖ ದಾಂಪತ್ಯ' ಎಲ್ಲಿರುತ್ತದೆ. ಎಂಬುದು ನಮಗೆ ಗೊತ್ತಿರುವ ವಿಚಾರವೇ ಆಗಿದೆ. ಇದನ್ನು ಕಂಡ ಬಹಳಷ್ಟು ಜನ ಗಂಡನಿಗಿಂತಾ, ಸಂಸಾರಾಕ್ಕಿಂತ ಆ ಸೈಟೇ ದೊಡ್ಡದಾ! ಅದಕ್ಕಾಗಿ ದೂರವಾಗುವುದೇ! ಹೀಗೆಲ್ಲಾ ಕೇಳಿದ್ದು ಇದೆ. ಸೈಟು ಕೊಟ್ಟು ವಿವಾಹದ ಭದ್ರತೆಯನ್ನು ಕಾಪಾಡಬೇಕೆ? ಎಂಬುದು ನನ್ನ ಗೆಳತಿಯ ವಾದ. ವ್ಯವಹಾರಕ್ಕೆ ಕೈ ಹಾಕಿದರೆ ಹೆಣ್ಣಿಗೆ ಯಾವ ಸಂಸ್ಥೆಯೂ ಭದ್ರತೆಯನ್ನು ನೀಡುವುದಿಲ್ಲ. ಸ್ವತಃ ತಾನು ಹುಟ್ಟಿ ಬೆಳೆದ ಮನೆಯವರೂ ದೂರವಾಗುತ್ತಾರೆ. ಆಸ್ತಿ ಹಕ್ಕನ್ನು ಕಾನೂನು ಮಾನ್ಯ ಮಾಡಿದರೂ ಸಾಮಾಜಿಕ ವ್ಯವಸ್ಥೆ ಮಾನ್ಯ ಮಾಡಿಲ್ಲ. ಇಂದಿಗೂ ಆಸ್ತಿ ವಿಷಯ ಕೇಳಿದರೆ ಎಷ್ಟು ವರದಕ್ಷಿಣೆ ಕೊಟ್ಟಾದರೂ ಮದುವೆ ಮಾಡಲು ಸಿದ್ಧರಿರುವ ತಂದೆ ಮತ್ತು ಕುಟುಂಬ ಅವರ ಆಸ್ತಿಯನ್ನು ಮಗಳ ಹೆಸರಿಗೆ ನೀಡಲಾರದು. ಒಂದು ಗಂಡಿಗೆ ಆಸ್ತಿ ವರ್ಗಾಯಿಸುವಂತೆ ಒಬ್ಬ ಹೆಣ್ಣು ಮಗಳಿಗೆ ಆಸ್ತಿ ವರ್ಗಾಯಿಸುವಷ್ಟು ದೊಡ್ಡ ಮನಸ್ಸನ್ನು ಇನ್ನೂ ಬೆಳೆಸಿಕೊಳ್ಳದೆ ಇರುವವರ ಸಂಖ್ಯೆಯೇ ಹೆಚ್ಚು. ಇದರಲ್ಲಿ ಎಲ್ಲಾ ಗಂಡಿನ ಮನಸ್ಸು ಒಂದೇ. ಸ್ಥಿರಾಸ್ತಿ ಯಾವಾಗಲೂ ಗಂಡಿನ ಕೈಯಲ್ಲಿರುವಂತೆ ನೋಡಿಕೊಳ್ಳುತ್ತದೆ. ಹೀಗಾಗಿಯೇ ವರದಕ್ಷಿಣೆ ರೂಪದಲ್ಲಿ ನೀಡಲಾಗುವ ಎಲ್ಲಾ ಹಣ, ವಸ್ತುಗಳನ್ನು ಗಂಡಿನ ಹೆಸರಿಗೆ ನೀಡಲಾಗುತ್ತದೆ. ತಂದೆ ಕೊಡಿಸುವ ಸ್ಕೂಟರ್, ಕಾರ್ ಮಗಳ ಹೆಸರಲ್ಲಿರಬಹುದಲ್ಲವೇ! ಸಾಧ್ಯವಿಲ್ಲವೆನ್ನುತ್ತಾರೆ ಹಲವರು. ಹೀಗಾಗಿ ಈ ವಿವಾಹ ಸಂಸ್ಥೆಯನ್ನು ತಮ್ಮ ಭದ್ರತೆಗಾಗಿಯೇ ಗಂಡು ರೂಪಿಸಿ, ಹೆಣ್ಣಿನ ಭದ್ರತೆಗಾಗಿ ಎಂದು ನಾಮಕರಣ ಮಾಡಿದ್ದಾರೆ.

ಸ್ವತಃ ನನ್ನ ತಂದೆಯೇ ಅಳಿಯಂದಿರಿಗೆ ಬಹಳಷ್ಟು ಗೌರವ ನೀಡಿವುದಲ್ಲದೆ, ಅವರ ಕೆಲವು ತಪ್ಪುಗಳನ್ನು ಸಮರ್ಥಿಸುತ್ತಾರೆ. ಅದನ್ನು ಪ್ರಶ್ನಿಸಿದರೆ, ಅಳಿಯಂದಿರಿಗೆ ಮಾವ ಹೆಚ್ಚು ಗೌರವ ಕೊಟ್ಟಷ್ಟೂ ಹೆಣ್ಣು ಮಕ್ಕಳಿಗೆ ಗಂಡನ ಮನೆಯಲ್ಲಿ ಭದ್ರತೆ ಇರುತ್ತದೆ ಎನ್ನುತ್ತಾರೆ. ಈ ಆಸೆ ಒಬ್ಬ ಗಂಡಿನದಲ್ಲ, ಲೋಕದ ಆಸೆಯೇ ಆದಾಗಿದೆ. ಅಳಿಯನನ್ನು ಗೌರವಿಸದ ಮನೆಗಳಲ್ಲಿ ಹೆಣ್ಣು ಮಕ್ಕಳು ತವರಿಗೆ ಬರದೇ ಇರುವುದನ್ನು ನಾನು ಬಹಳಷ್ಟು ಗಮನಿಸಿದ್ದೇನೆ. ಇಂಥ ಸ್ಥಿತಿಯಲ್ಲಿ ಭದ್ರತೆಯನ್ನು ಹೆಣ್ಣು ಎಲ್ಲಿ ಹುಡುಕಬೇಕೆಂಬುದೇ ಪ್ರಶ್ನೆ. ಗಾಜಿನಲ್ಲಿ ಕಾಣುವ ಪ್ರತಿಬಿಂಬದಂತೆ ಈ ಭದ್ರತೆ. ಹಿಡಿಯಲಾಗದ್ದು, ಅದರೆ ಅದು ಇದೆ ಎಂಬ ಭ್ರಮೆ ಇದೆ.

ವಿವಾಹ ಸಂಸ್ಥೆಯ ಆಚೆಗಿನ ಜೀವನವು ಹೆಣ್ಣಿಗೆ ಅಪಮಾನಗಳಿಂದ ಕೂಡಿರುತ್ತದೆ ಎನ್ನುವವರಿದ್ದಾರೆ. ವಿವಾಹಿತ ಸ್ತ್ರೀಯರ ಅಪಮಾನಗಳನ್ನು ಏನೆಂದು ಕರೆಯಬೇಕು? ಯಾರಲ್ಲೂ

ಉತ್ತರವಿಲ್ಲ. ಭದ್ರತೆಯ ಹೆಸರಿನಲ್ಲಿ ಈ ಸಂಸ್ಥೆಯನ್ನು ಪರಿವರ್ತನೆಯಾಗದಂತೆ ಇಡುವ ಪ್ರಯತ್ನ ಪುರುಷ ಪ್ರಧಾನ ವ್ಯವಸ್ಥೆಯ ಮುಖ್ಯ ಗುರಿಗಳಲ್ಲೊಂದು ಎಂದು ಭಾವಿಸಬೇಕಾಗಿದೆ.

■ *ಡಾ. ಆರ್. ಸುನಂದಮ್ಮ*

ಫರೂಖಬಾದ್-ಉತ್ತರ ಪ್ರದೇಶ

● ನೀಡುತ್ತದೆ ಎಂದರೆ ನೀಡುತ್ತದೆ, ಇಲ್ಲ ಎಂದರೆ ಇಲ್ಲ.
ಆಟಕ್ಕುಂಟು ಲೆಕ್ಕಕ್ಕಿಲ್ಲದ ಕುಂಟಾ ಬಿಲ್ಲೆ ಆಟ.
ಭದ್ರತೆ? ಏನು ಹಾಗೆಂದರೆ? ಕೇಳುತ್ತದೆ. ವ್ಯವಸ್ಥೆ.
ಪೂಜಿಸಿಲ್ಲವೇ ನಾವು ಕಲ್ಲಿನ ಗುಡಿಗಳಲ್ಲಿ
ಯತ್ರ ನಾರ್‍ಯಸ್ತು ಪೂಜ್ಯಂತೇ...ಎಂದು.
ಹಾಗೆಯೇ ಹಾಕಿಲ್ಲವೇ ಬೇಡಿ ನ ಸ್ತ್ರೀ ಸ್ವಾತಂತ್ರ್ಯಂ
ಅರ್ಹತಿ...ಎಂದು.
ವಿವಾಹದ ಭದ್ರತೆಯೊಳಗೇಕೆ ಸ್ವಾತಂತ್ರ್ಯ?
ಚಿನ್ನದ ಕೈ ಕೋಳವಿದೆ ಪಡಿರಿ ಸಂತೋಷ.
ನಡೆಯುತ್ತಿದೆ ಭಾರಿ ಭಾರಿ ರೇಪುಗಳು ರಸ್ತೆಗಳಲ್ಲಿ ಗಲ್ಲಿಗಳಲ್ಲಿ
ಬಾರುಗಳಲ್ಲಿ ಕಾರುಗಳಲ್ಲಿ ಹಾಗೆಯೇ ಕಿರುತೆರೆ ಬೆಳ್ಳಿ
ತೆರೆಗಳಲ್ಲಿ
ನಾಟಕಗಳು ಮಹಡಿ ಮಾಡುಗಳಲ್ಲಿ ಯಾರಾದರೇನು
ಮಾಧುರಿ, ಕರೀನಾ, ಕರಿಷ್ಮಾ ಯಾವ ಚರಿಷ್ಮ ಹೇಳಿ
ಹೇಮಾಮಾಲಿನಿಗೂ ತಪ್ಪಲಿಲ್ಲ ಈ ಹಾವಳಿ.
ರಾಜನಾದವನು ನರಕವನ್ನು ನೋಡಲೇ ಬೇಕೆಂತೆ ಹೇಳುತ್ತದೆ
ಮಹಾಭಾರತ, ಹೀರೋಯಿನ್ನು ರೇಪಾಗಲೇ ಬೇಕು ಎನ್ನುತ್ತಾನೆ
ಈ ಆಧುನಿಕ ವ್ಯಾಸ: ಇದಿಲ್ಲದೇ ಸಿನಿಮಾನೇ ಓಡೋಲ್ಲವಲ್ಲ
ಏನು ಮಾಡೋಣ ಹೇಳಿ ಬರಬೇಡವೇ ಹಾಕಿದ ಬಂಡವಾಳ.
ಅದ ಕಂಡು ಇದ ಮಾಡುವವರು ನಾವಲ್ಲ ಎಂದೇ ಯುವಕರು
ತೆರೆಯ ಮೇಲೆ ಆ ವಿಲನ್ನು ಆ ತಾರೆಗೆ ಮಾಡಿದ್ದನ್ನು
ರಸ್ತೆಯಲಿ ಹೋಗುವ ಈ ತಾರಾಗೆ ಮಾಡಹೋಗಿ ಕಂಬಿ
ಎಣಿಸುತ್ತಾರೆ. ಆದರೂ ಮನಸ್ಸಿನಲ್ಲೇ ಗುಣಿಸುತ್ತಾರೆ.
ಈ ಹುಡುಗಿ ವಿವಾಹಿತಳಾದರೂ ಸರಿ, ತಾಯಿಯಾದರೂ ಸರಿ,
ಆಂಟಿಯಾದರೂ ಸರಿ, ಆಂಟಿ ಪ್ರೀತ್ಸೇ ಎನ್ನಲ್ಲವೇ ಆ
ಸಿನಿಮಾದವರು, ಪ್ರೀತ್ಸೇ ಎಂದು ಕಾಡಲಿಲ್ಲವೇ ಈ ಉಪೇಂದ್ರರು
ಎಂದೇ ಅವನಿಗೆ ಭಂಡ ಧೈರ್ಯ ಈ ಗಂಡನೋ ಇನ್ನೊಬ್ಬ
ಭಂಡ. ಇವನಿಗೆ ಬೇಕಿತ್ತು ಮದುವೆ ಹೆಸರಲಿ ಪಾಲಗ
ಭತ್ಯ, ಸಂಬಳ ಸಾರಿಗೆ ಎಲ್.ಐ.ಸಿ. ಪಾಲಿಸಿ ಮಾತ್ರ,
ಇವಳು ಸತ್ತರೂ ಅವನೇ ನಾಮಿನಿ ಗೊತ್ತ.
ಬರೆದರೇನು ಲೇಖನ ಮೂರು ಪುಟ(ನೀವು ಕೇಳಿದಂತೆ)
ತಪ್ಪದು ಇವಳಿಗೆ ಕಾಟ
ವಿವಾಹದೊಳಗೂ ಹೊರಗೂ ಭದ್ರತೆ ಗಗನ ಕುಸುಮ
ಭದ್ರತೆ ಮಾತ್ರವೇ ನೆಮ್ಮದಿ ಸುಖ ಸಂತೋಷ ಇನ್ನೂ
ಏನೇನೋ ಎಲ್ಲವೂ ನೆಲಸಮ.

■ *ಡಾ. ಎಸ್. ವಿ. ಪ್ರಭಾವತಿ*

● ಇದು ಬಹಳ ಯೋಚಿಸಬೇಕಾದ ವಿಷಯ. ಏಕೆಂದರೆ ಪುರಾತನ ಕಾಲದಿಂದಲೂ ನಡೆದ ಸಂಘಟನೆಗಳಲ್ಲಿ ಅಂತಹ ಯಾವುದೇ ಒಂದು ಭದ್ರತೆ ಮಹಿಳೆಗೆ ವಿವಾಹದಿಂದ ಸಿಗಲಿಲ್ಲ.

ಸೀತೆಯನ್ನು ಮದುವೆಯಾದ ರಾಮ ತನ್ನನ್ನು ಕಾಡಿಗೆ ಕಳುಹಿಸಿದಾಗ ಸೀತೆ ಅವನ ಮಾತನ್ನು ಗೌರವಿಸದಿದ್ದರೆ ಇಂದು ರಾಮನನ್ನು ನಾವು ಮರ್ಯಾದಾ ಪುರುಷೋತ್ತಮ ಎನ್ನುತ್ತಿರಲಿಲ್ಲ. ಮಹಾಭಾರತದಲ್ಲಿ ಪಾಂಚಾಲಿಗೆ ಐದು ಗಂಡಂದಿರು ಇದ್ದರೂ ಅವಳ ಸೀರೆಯನ್ನು ದುಶ್ಯಾಸನನು ಎಳೆಯುತ್ತಿರುವಾಗ ಅವಳಿಗೆ ಆ ಐವರು ಗಂಡಂದಿರು ಭದ್ರತೆಯನ್ನು ನೀಡಲಿಲ್ಲ. ಅಂತಹ ದೇವತೆಗಳಿಗೆ ಭದ್ರತೆ ಸಿಗದಿದ್ದ ಈ ಸಮಾಜದಲ್ಲಿ ಒಂದು ಸಾಮಾನ್ಯ ಹೆಣ್ಣಿಗೆ ಮದುವೆ ಆದ ಕೂಡಲೆ ಭದ್ರತೆ ಸಿಗುವುದು ಎಂದು ತಿಳಿಯುವುದು ಮೂರ್ಖತನ.

ಈ ಕಾಲದಲ್ಲಿ ಹೆಣ್ಣು ವರದಕ್ಷಿಣೆ ಕೊಟ್ಟು ತನ್ನ ಗಂಡನನ್ನು ಕೊಂಡುಕೊಳ್ಳುವಳು. ಮನೆಯಲ್ಲಿ ದುಡಿದು ಮತ್ತೆ ಹೊರಗಡೆ ಕೆಲಸ ಮಾಡಿ ತನ್ನ ಗಂಡನಿಗೆ ಎಲ್ಲಾ ಕಡೆಯಿಂದಲು ಭದ್ರತೆಯನ್ನು ನೀಡುತ್ತಾಳೆ.

ಪ್ರತಿಯೊಬ್ಬ ಗಂಡಿನ ಯಶಸ್ಸಿನ ಹಿಂದೆ ಒಂದು ಮಹಿಳೆ ಇರುತ್ತಾಳೆ ಎಂದು ಹೇಳುತ್ತಾರೆಯೇ, ಹೊರತು ಪ್ರತಿಯೊಬ್ಬ ಹೆಣ್ಣಿನ ಯಶಸ್ಸಿನ ಹಿಂದೆ ಒಂದು ಗಂಡು ಇರುವನು ಎಂದು ಯಾರೂ ಹೇಳುವುದಿಲ್ಲ. ಹೆಣ್ಣಿಗೆ ಕ್ಷಮಯಾಧರಿತ್ರಿ ಹಾಗೆ ಹೀಗೆ ಎಂದು ಲೇಬಲ್‌ಗಳನ್ನು ಅಂಟಿಸಿ ಅವಳನ್ನು ಆ ಲೇಬಲ್‌ಗಳ ಗುಣಗಳಿಗೆ ಅಳವಡಿಸಿ ಹೋಗುವಂತೆ ಮಾಡಿರುವವರು ಗಂಡಸರೆ. ಹಿಂದಿನ ಕಾಲದಲ್ಲಿ ಮಹಿಳೆ ಓದುತ್ತಿರಲಿಲ್ಲ. ಆದ್ದರಿಂದ ಅವಳಿಗೆ ಪ್ರಪಂಚಜ್ಞಾನ ಕಡಿಮೆ. ಗಂಡು ಕೊಡುವ ಹಿಂಸೆಗಳನ್ನು ಅನುಭವಿಸುತ್ತಿದ್ದಳು. ಜೀವನದಲ್ಲಿ ಬೇಸತ್ತ ಮೇಲೆ ಆತ್ಮಹತ್ಯೆಗೆ ಒಳಗಾಗುತ್ತಿದ್ದಳೇ ಹೊರತು ಗಂಡನನ್ನು ಬಿಟ್ಟು ಬಂದು ಬಾಳುವ ಯೋಚನೆ ಮಾಡುತ್ತಿರಲಿಲ್ಲ. ಇದು ಅವಳ ತಪ್ಪು ಅಲ್ಲವೇ ಅಲ್ಲ. ಅವಳನ್ನು ತನ್ನ ಗಂಡನೇ ದೇವರು ಎಂಬ ಮಾತಿನಲ್ಲಿ

ಬಂಧಿಸುತ್ತಿದ್ದರು. ಇದನ್ನು ನೀವು ಭದ್ರತೆಯೆಂದು ಕರೆಯುವುದಾದರೆ ಇದಕ್ಕಿಂತ ಅಸಹನೀಯವಾದ ಸಂಗತಿ ಬೇರೊಂದು ಇಲ್ಲ.

ಈ ಶತಮಾನದಲ್ಲಿ ಶೇಕಡ 90 ಮಹಿಳೆಯರು ಮದುವೆಯಾಗಿದ್ದರೂ ಒಂಟಿಯಾಗಿ ಬದುಕುತ್ತಿದ್ದಾರೆ. ಯಾಕೆ? ಏಕೆಂದರೆ ಅವಳಿಗೆ ಮದುವೆಯಿಂದ ಎಂತಹ ಭದ್ರತೆಯು ಸಿಗಲಿಲ್ಲ.

ಈ ಎಲ್ಲಾ ವಿಷಯಗಳನ್ನು ಚೆನ್ನಾಗಿ ಆಲೋಚಿಸಿದರೆ ನಮಗೆ ತಿಳಿದು ಬರುವುದೇನೆಂದರೆ, ಸಾಮಾಜಿಕವಾಗಿ ಅಥವಾ ಆರ್ಥಿಕವಾಗಿ ಮದುವೆಯಿಂದ ಭದ್ರತೆ ಸಿಗುವುದು ಗಂಡಿಗೆ ಹೊರತು ಹೆಣ್ಣಿಗೆ ಅಲ್ಲವೇ ಅಲ್ಲ.

■ *ಮೋಹನಾಂಬ*

● 'ನಃ ಸ್ತ್ರೀ ಸ್ವಾತಂತ್ರ್ಯಂ ಅರ್ಹತಿಃ' ಅಂದರೆ ಹೆಣ್ಣು ಯಾವಾಗಲೂ ಪುರುಷರ ಅಡಿಯಾಳಾಗಿ ಇರಬೇಕು ಬಾಲ್ಯದಲ್ಲಿ ತಂದೆಯ ಆಸರೆಯಲ್ಲಿ, ಯೌವ್ವನದಲ್ಲಿ ಗಂಡನ ಆಶ್ರಯ ಮುಪ್ಪಿನಲ್ಲಿ ಮಕ್ಕಳ ಆಳ್ವಿಕೆಯಲ್ಲಿ ಇರಬೇಕು ಎಂದಿದ್ದಾರೆ. ಆದರೆ ಇದು ನಿಜವಾಗಲೂ ಸರಿಯಲ್ಲ. ಈಗ ಹೆಣ್ಣು ಅಬಲೆಯಲ್ಲ, ಸಬಲೆ. ಸ್ವಾವಲಂಬಿಯಾಗಿ ದುಡಿದು ಸಂಸಾರವನ್ನು ತೂಗಿಸಬಲ್ಲ ಮನೋದಾರ್ಢ್ಯವನ್ನು ಬೆಳೆಸಿಕೊಂಡಿದ್ದಾಳೆ. ಗಂಡು ಹೆಣ್ಣಿಲ್ಲದೇ ಬದುಕಲಾರ. ಹೆಂಡತಿ ಸತ್ತರೆ ಕೆಲವೇ ದಿನಗಳಲ್ಲಿ ಅವನಿಗೆ ಕಷ್ಟ ಎಂದು ಮರು ಮದುವೆ ಮಾಡಿಸುತ್ತಾರೆ. ಆದರೆ ಹೆಣ್ಣಿನ ಗಂಡ ಸತ್ತರೆ, ಅವಳು ದಿಟ್ಟತನದಿಂದ ಕಷ್ಟಗಳನ್ನು ಎದುರಿಸುತ್ತಾ ಜೀವನ ನಡೆಸಬಲ್ಲಳು. ಹೆಣ್ಣು ತಂದೆ, ತಾಯಿಯ ಎರಡೂ ಸ್ಥಾನ ತುಂಬಬಲ್ಲಳು. ಆದರೆ ಗಂಡಿಗೆ ಅದು ಸಾಧ್ಯವಿಲ್ಲ.

ಗಂಡು-ಹೆಣ್ಣು ಸಂಸಾರ ರಥದ ಎರಡು ಚಕ್ರಗಳಿದ್ದಂತೆ. ಇಬ್ಬರಲ್ಲೂ ಆತ್ಮೀಯತೆ, ಪ್ರೀತಿ, ಅನ್ಯೋನ್ಯತೆ ಹೊಂದಾಣಿಕೆ ಗಳಿದ್ದರೆ ಅದು ಆನಂದ ಸಾಗರ. ಇಲ್ಲದಿದ್ದಲ್ಲಿ ಅದೊಂದು ನರಕವೇ ಸರಿ. ಈಗ ಹೆಣ್ಣು ಗಂಡಿಗೆ ಸರಿಸಮಾನವಾಗಿ ದುಡಿಯುವುದರಿಂದ ಅವಳು ಹಣಕಾಸಿನ ವ್ಯವಹಾರದಲ್ಲಿ ಗಂಡನ ಮುಂದೆ ಕೈ ಚಾಚಿ ನಿಲ್ಲುವ ಸಾಧ್ಯತೆ ಕಡಿಮೆ. ಮನೆಯ ಒಳಗೆ, ಹೊರಗೆ ದುಡಿಯುವ ಅವಳು ಎಲ್ಲ ಕೆಲಸಗಳನ್ನು ನಿಭಾಯಿಸ ಬಲ್ಲಳು. ಇಂಥ ಕೆಲಸ ಗಂಡನ ಸಹಾಯವಿಲ್ಲದೆ ಮಾಡೋದಕ್ಕೆ ಆಗೋದೆ ಇಲ್ಲ ಎನ್ನುವ ಹಾಗಿಲ್ಲ. ಮನೆ ನಡೆಸುವ ವಿಷಯದಲ್ಲಾಗಲಿ, ಮಕ್ಕಳ ಓದಿನ ವಿಷಯದಲ್ಲಾಗಲಿ, ಮನೆ ಕಟ್ಟುವ ವಿಷಯದಲ್ಲಾಗಲಿ ಗಂಡ ಇರಲೇ ಬೇಕು ಎನ್ನುವ ಪರಿಸ್ಥಿತಿ ಇಲ್ಲ.

ಒಂದು ವೇಳೆ ಗಂಡ ಕುಡುಕನಾಗಿದ್ದರೆ, ಬರುವ ಸಂಬಳ ತನ್ನ ಕುಡಿತಕ್ಕೆ ಸಾಲದೇ ಹೆಂಡತಿ ತರುವ ಸಂಬಳವನ್ನು ಹೊಡೆದು, ಬಡಿದು ಕಿತ್ತುಕೊಂಡಾಗ, ಅವನು ತನ್ನ ಹೆಂಡತಿಗೆ ಯಾವ ರೀತಿಯ ಭದ್ರತೆಯನ್ನು ನೀಡಬಲ್ಲ? ಊಟಕ್ಕಿಲ್ಲ, ಬಟ್ಟೆಗಿಲ್ಲ ಮಕ್ಕಳನ್ನು ಸಾಕಲು ಯೋಗ್ಯತೆಯಿಲ್ಲ ಇಂಥ ಗಂಡಸರು ಹೆಂಡತಿ ಮಕ್ಕಳನ್ನು ಹೇಗೆ ನೋಡಿಕೊಳ್ಳುವರು? ಇನ್ನು ಕೆಲವರು ಕೆಲಸಕ್ಕೇ ಹೋಗೋಲ್ಲ; ಹೆಂಡತಿಯನ್ನು ಕೆಲಸಕ್ಕೆ ಕಳಿಸೋಲ್ಲ. ನಿಮ್ಮ ಅಪ್ಪನ ಮನೆಯಿಂದ ದುಡ್ಡು ತಾ ಎಂದು ಪೀಡಿಸುವ ಮಂದಿಯೆಷ್ಟಿಲ್ಲ? ಸಾವಿರಾರು ರೂಪಾಯಿ ಸಾಲ ಮಾಡಿ, ಮದುವೆ ಮಾಡಿಸಿ ಇವರ ಸಂಸಾರ ಸಾಗಿಸಲು ಹಣ ಎಲ್ಲಿಂದ ತರುತ್ತಾರೆ ಆ ನತದೃಷ್ಟ ತಂದೆ ತಾಯಿಗಳು?

ತಾವೇ ಇಷ್ಟಪಟ್ಟು, ಪ್ರೀತಿಸಿ ಮದುವೆ ಮಾಡಿಕೊಂಡು ಹೆಣ್ಣು ಮಕ್ಕಳೂ ಈ ದಿನ ತಮ್ಮ ಸ್ಥಿತಿಗೆ ತಾವೇ ನರಕಯಾತನೆ ಪಡುತ್ತಿದ್ದಾರೆ. ಪ್ರೀತಿಸಿ ಕೈ ಹಿಡಿದ ಗಂಡ ಕುಡುಕ, ಬಂದ ಸಂಬಳ ಮನೆಗೆ ಕೊಡೋಲ್ಲ, ಹೆಂಡತಿ, ಮಕ್ಕಳ ಯೋಚನೆಯಿಲ್ಲ, ಇಂಥವನನ್ನು ಕಟ್ಟಿಕೊಂಡು ಜೀವನ ಎದುರಿಸಬೇಕಾದರೆ ಮಕ್ಕಳನ್ನು ಹೆತ್ತ ತಪ್ಪಿಗೆ ತಾನೇ ಕೆಲಸಕ್ಕೆ ಹೋದರೂ ಮೊದಲು 'ಬೇಬಿ ಕ್ರೀಚ್‌ಗೆ' ಬಿಡಬೇಕು, ಸಂಜೆ ಮನೆಗೆ ಕರೆತರಬೇಕು, ಅವುಗಳ ಲಾಲನೆ ಪಾಲನೆ ಮಾಡಬೇಕು. ತನ್ನ ಮತ್ತು ಮಕ್ಕಳ ಬೇಕು ಬೇಡಗಳನ್ನು ನೋಡಿಕೊಳ್ಳಬೇಕು. ಇದರ ಜೊತೆಗೆ ಕುಡುಕ ಗಂಡನಿಗೆ ರುಚಿ ರುಚಿಯಾಗಿ ಬೇಯಿಸಬೇಕು. ಇಲ್ಲದಿದ್ದಲ್ಲಿ ಹೊಡೆತಗಳ ಸುರಿಮಳೆ. ಇದಕ್ಕೆ ಹೆದರಿ ಜೀವನ ನಡೆಸುತ್ತಿರುವ ಹೆಣ್ಣು ಮಕ್ಕಳು ನಮ್ಮ ನಿಮ್ಮ ಸುತ್ತ ಮುತ್ತಲಿದ್ದಾರೆ. ಇವರಿಗೆ ಮದು ೆ ಭದ್ರತೆ ನೀಡಿದೆಯೇ?

ಇನ್ನೊಂದು ವಿಚಿತ್ರ ರೀತಿಯ ಗಂಡಸರು ಇದ್ದಾರೆ. ಅವರಿಗೆ ಹೆಂಡತಿ ಮಕ್ಕಳ ಯೋಚನೆಯಿಲ್ಲ. ಇಂಥವರಿಗೆ ಮದುವೆ ಬೇಕು ಹೆಂಡತಿಬೇಕು, ಮಕ್ಕಳು ಬೇಕು, ಆದರೆ ಜವಾಬ್ದಾರಿ ಏನೂ ಬೇಡ. ಬಂದ ಸಂಬಳವನ್ನು ತನ್ನ ಬೇಕು ಬೇಡಗಳ ಪೂರೈಕೆಗಳನ್ನು ಪೂರೈಸಿಕೊಂಡು ದುಡ್ಡು ಗಂಟು ಮಾಡಿಕೊಳ್ಳುವರು. ಇವರಿಗೆ ಯಾವುದೇ ದುಶ್ಚಟಗಳಿಲ್ಲ. ಆದರೆ ದುಡ್ಡು ಮಾತ್ರ ಖರ್ಚು ಮಾಡಬಾರದು. ಜೀವನ ತೂಗಿಸಲು ಬೇಕಾಗುವ ಖರ್ಚು ವೆಚ್ಚಗಳನ್ನು ಹೆಂಡತಿ ಮಾಡಬಾರದು. ಮಾಡಿದರೆ ಅದು ಅವನ ದೃಷ್ಟಿಯಲ್ಲಿ ದುಂದುವೆಚ್ಚ. ಇನ್ನು ಕೆಲವು ಮಂದಿಗೆ ಹೆಂಡತಿ ಕೆಲಸಕ್ಕೆ ಹೋಗಬೇಕು ಸಂಬಳ ಪೂರ್ತಿ ಗಂಡನ ಕೈಗೆ ಕೊಡಬೇಕು. ಇವಳ ಪೂರೈಕೆಗಳು ಕೇವಲ ಅವನ ಇಚ್ಛೆಯಂತೆ ಅವಳ ಆಸೆ, ಭಾವನೆಗಳಿಗೆ ಬೆಲೆಯಿಲ್ಲ. ಇಲ್ಲ, ಕೇವಲ ಷೋಕೇಸ್ ಬೊಂಬೆ ಯಂತೆ ಗಂಡನ ಪ್ರತಿಷ್ಠೆಯನ್ನು ತೋರಿಸಿಕೊಳ್ಳಲು ಗಂಡನ

ಇಚ್ಛೆಯಂತೆ ಅತಿ ಬೆಲೆಬಾಳುವ ಉಡುಗೆ ತೊಡುಗೆಗಳನ್ನು ಧರಿಸಿ ಓಡಾಡುವುದು. ಇದು ಒಂದು ಜೀವನವೇ?

ಈ ರೀತಿ ನಾನಾ ರೀತಿಯಲ್ಲಿ ನಮ್ಮ ಸುತ್ತಮುತ್ತಲಿನ ಹೆಣ್ಣು ಮಕ್ಕಳು (ನಾವೂ ಸಹ) ಗಂಡಿನ ರಾಕ್ಷಸ ತುಳಿತಕ್ಕೆ ಸಿಕ್ಕಿ ನಲುಗುತ್ತಿದ್ದೇವೆ. ಇದನ್ನೆಲ್ಲ ನೋಡಿದರೆ ನಮಗೆ ಯಾವ ರೀತಿ ಭದ್ರತೆ ಸಿಗುತ್ತಿದೆ ಈ ಮದುವೆಯಿಂದ? ಎಂದು ನಮ್ಮನ್ನು ನಾವೇ ಪ್ರಶ್ನಿಸುವಂತೆ ಆಗುತ್ತದೆ.

ಖಂಡಿತವಾಗಿ "ವಿವಾಹ ಮಹಿಳೆಗೆ ಭದ್ರತೆ ನೀಡುತ್ತಿಲ್ಲ?" ಗಂಡು ಹೆಣ್ಣಿನ ನಡುವಿನ ಸಂಬಂಧಗಳಲ್ಲಿ ಹಿಂದೆ ಇದ್ದ ಸುಮಧುರ ಭಾವನೆಗಳು ಈಗ ಕಾಣುತ್ತಿಲ್ಲ. ಪಾಶ್ಚಾತ್ಯ ದೇಶಗಳಲ್ಲಿ ಕಾಣುತ್ತಿದ್ದ ವಿವಾಹ ವಿಚ್ಛೇದನಗಳು ನಮ್ಮಲ್ಲಿ ಈಗ ಸರ್ವ ಸಾಮಾನ್ಯವಾಗಿವೆ. ವರದಕ್ಷಿಣೆ ಕೊಡಲಿಲ್ಲವೆಂದು ಹೆಂಡತಿ ತನ್ನ ಅಂತಸ್ತಿಗೆ, ವಿದ್ಯೆಗೆ ಸರಿಸಮಾನವಾಗಿಲ್ಲವೆಂದು ಬೇರೆ ಹೆಣ್ಣಿನಲ್ಲಿ ಆಸಕ್ತಿ ಹೊಂದಿ ಗಂಡ ಹೆಂಡತಿಯರು ದೂರವಾಗುವ ಕಾಲ ಇದಾಗಿದೆ. ಈ ವಿಪರೀತ ಪರಿಸ್ಥಿತಿಗಳಲ್ಲಿ ಮದುವೆ ಹೆಣ್ಣಿಗೆ ಯಾವ ಭದ್ರತೆ ನೀಡುತ್ತದೆ? ಇನ್ನೊಂದು ರೀತಿಯಲ್ಲಿ ನೋಡಿದರೆ ಮದುವೆ ಗಂಡಿಗೆ ಒಳ್ಳೇ ಭದ್ರತೆ ನೀಡುತ್ತದೆ. ಏಕೆಂದರೆ, ಹೊತ್ತು ಹೊತ್ತಿಗೆ ಬಿಸಿ ಬಿಸಿ ಅಡುಗೆ ಮಾಡಿ ಬಡಿಸುವ ಅವನ ಮಕ್ಕಳ ಲಾಲನೆ, ಪಾಲನೆ ಮಾಡುತ್ತಾ ಅವನ ಸಂಸಾರವನ್ನು ತೂಗಿಸುವಳು ಅವನ ಹೆಂಡತಿ. ಗಂಡ ಕುಡುಕನಾಗಲಿ, ಜೂಜುಕೋರನಾಗಲಿ, ಒದೆಯಲಿ, ಬಡಿಯಲಿ ಅವನ ಜೊತೆ ಹೊಂದಾಣಿಕೆಯಿಂದ ಬಾಳಬೇಕೆಂದು ಅವಳಿಗೇ ಬುದ್ಧಿ ಹೇಳುತ್ತದೆ ನಮ್ಮ ಈ ಸಮಾಜ. ಹೀಗೆ ಅವನು/ಗಂಡು ಯಾವ ರೀತಿ ಹೇಗೆ ಇರಲಿ ಅವನು ಮಾಡುತ್ತಿರುವುದು ಸರಿ ಎನ್ನುವ ಈ ಪುರುಷ ಪ್ರಧಾನ ಸಮಾಜ ಮಹಿಳೆಗೆ ಭದ್ರತೆ ನೀಡುವುದಿಲ್ಲ. ಇದು ಅವಳ ಪಾಲಿಗೆ ಚಿನ್ನದ ಪಂಜರ. ಧೈರ್ಯ ವಹಿಸಿ ಈ ಪಂಜರದಿಂದ ಹೊರಗೆ ಬಂದು ಸ್ವತಂತ್ರವಾಗಿ ಉಸಿರಾಡಿದರೆ ಅದೇ ಅವಳಿಗೆ ಹೊನ್ನಿನ ಕೀರಿಟವಿಟ್ಟಂತೆ. ಈ ಕೂಗು ನನ್ನ ಗೆಳತಿಯರಿಗೆ ಕೇಳಿಸಿದರೆ ಅಷ್ಟೇ ಸಾಕು.

ಮದುವೆ ಹೆಣ್ಣಿಗೆ ಭದ್ರತೆಯನ್ನು ನೀಡುತ್ತದೆ ಎನ್ನುವುದಕ್ಕಿಂತ ಗಂಡಿಗೆ ಸಂಪೂರ್ಣವಾದ ಭದ್ರತೆಯನ್ನು ನೀಡುತ್ತದೆ ಎನ್ನುವುದು ಸೂಕ್ತ. ಈಗಿರುವ ಸಾಮಾಜಿಕ ಮೌಲ್ಯಗಳ ಹಿನ್ನೆಲೆಯಲ್ಲಿ ಹೆಣ್ಣು ಬಾಲ್ಯದಲ್ಲಿ ತಂದೆಯ ಆಶ್ರಯದಲ್ಲಿ ಯೌವನದಲ್ಲಿ ಗಂಡನ ಮತ್ತು ವೃದ್ಧಾಪ್ಯದಲ್ಲಿ ಮಗನ ಆಶ್ರಯದಲ್ಲಿ ಇರುತ್ತಾಳೆ. ಇದು ಅನಿವಾರ್ಯ ಅನಿಸುವ ಹಾಗೆ ನಮ್ಮ ಪಿತೃಪ್ರಧಾನ ಸಮಾಜವು ನಡೆಸಿಕೊಂಡು ಬಂದಿದೆ. ನಮ್ಮ ಹೆಣ್ಣು ಮಕ್ಕಳು ಈ ಚೌಕಟ್ಟಿನೊಳಗೆ ಯೋಚಿಸುತ್ತಾ, ನಾವು ಹೀಗೇ ಇರಬೇಕಾಗಿರೋದು ಎಂಬ ಭಾವನೆಯಲ್ಲಿಯೇ ಬೆಳೆದಿರುತ್ತಾರೆ. ಬಾಲ್ಯದಲ್ಲಿ ಗಂಡು-ಹಾಗೂ ಹೆಣ್ಣು ಮಕ್ಕಳಿಬ್ಬರೂ ತಂದೆ ತಾಯಿಯ ಆಶ್ರಯದಲ್ಲಿ ಇರಬೇಕಾದಂಥವರೇ. ಆದರೆ ಇಲ್ಲಿ ಹೆಣ್ಣಿಗೆ ಮಾತ್ರ ಆಶ್ರಯದ ಪ್ರಶ್ನೆ ಏಕೆ?

ಅನಾದಿ ಕಾಲದಿಂದಲೂ ಹೆಣ್ಣು ಋತುಮತಿಯಾದ ತಕ್ಷಣದಲ್ಲೇ ಅವಳಿಗೆ ವಯಸ್ಸಾದಂತೆ. ಅವಳಿಗೆ ಹತ್ತು ವರ್ಷವಾಗಿದ್ದರು ಅಲ್ಲಿಗೆ ಅವಳ ಬಾಲ್ಯ ಮುಗಿದಂತೆಯೆ. ಅಲ್ಲಿಂದ ಅವಳಿಗೆ ಕಟ್ಟುಪ್ಪಾಡುಗಳು ಹೆಚ್ಚಾಗುತ್ತಾ ಹೋಗುತ್ತವೆ. ಆಚೆ ಹೋಗಬೇಡ, ಅವರಿವರ ಜೊತೆಯಲ್ಲಿ ಮಾತನಾಡಬೇಡ, ಗಂಡು ಹುಡುಗರ ಜೊತೆಯಲ್ಲಿ ಕುಳಿತು ಕೊಳ್ಳಬೇಡ ಇಂತಹವು ಎಷ್ಟೋ. ಅಲ್ಲಿಯ ತನಕ ನಿರಾತಂಕವಾಗಿ ಆಡಿಕೊಂಡಿದ್ದ ಮಗುವಿಗೆ ಒಮ್ಮೆಲೇ ಮನಸ್ಸಿಗೆ ಆತಂಕ. ಅಲ್ಲಿಂದ ಅವಳಿಗೆ ಯೋಚನೆ ಮಾಡುವ ವಯಸ್ಸಲ್ಲದಿದ್ದರೂ ಯೋಚನೆಗಳು ತಾನಾಗಿಯೇ ಶುರುವಾಗುತ್ತೆ. ಇನ್ನು ತಂದೆ ತಾಯಿಯರ ಕಾಟ. ಅವಳಿಗೆ ಮದುವೆ ಮಾಡಿ ಬಿಟ್ಟರೆ ತಾವು ಸುಭದ್ರ ಅಂತ. ಆದರೆ ಆಗಲೇ ಶುರುವಾಗುತ್ತದೆ ಹೆಣ್ಣಿನ ನಿಜವಾದ ಅಭದ್ರತೆ. ಮಹಿಳೆಗೆ ಮದುವೆಯಿಂದ ಭದ್ರತೆಗಿಂತ ಅವಳ ನೆರಳಲ್ಲಿ ಗಂಡು ಭದ್ರವಾಗಿರುತ್ತಾನೆ. ಎಲ್ಲಾ ಕಾರ್ಯಗಳನ್ನು ಆಕೆ ನಿರ್ವಹಿಸುತ್ತಾಳೆ. ಬುದ್ಧಿವಂತನಂತೆ ಕಾಣುವ ಗಂಡಸು ಅವಳ ಮೇಲೆ ಎಲ್ಲ ಭಾರ ಹಾಕಿ ನಿಶ್ಚಿಂತೆಯಿಂದ ಇರುತ್ತಾನೆ. ತಮ್ಮಿಂದ ಮಾಡಲು ಸಾಧ್ಯವಾಗುವ ಕೆಲಸವನ್ನು ಸಹ ಅವರು ಮಾಡುವುದಿಲ್ಲ. ಬೆಳಗ್ಗೆ ಎದ್ದಾಗಿನಿಂದ ಒಂದು ಲೋಟ ಕಾಫಿ ಕುಡಿಯುವುದರಿಂದ ಹಿಡಿದು, ಸ್ನಾನಕ್ಕೆ ಹೋದರೆ ಟವಲ್, ಒಳ ಉಡುಪುಗಳನ್ನು ಸಹ ಬಿಚ್ಚಲು ಮನೆಗೆ ತೆಗೆದುಕೊಂಡು ಹೋಗದೆ ಹೆಣ್ಣನ್ನು ಅವಲಂಬಿಸುವ ಅವನು ನಿಜಸ್ಥಿತಿಯಲ್ಲಿ ಹೆಣ್ಣಿಗೆ ಯಾವ ಭದ್ರತೆಯನ್ನು ಕೊಡಬಲ್ಲ?

ಮದುವೆಯಿಂದ ಅಭದ್ರತೆಗೆ ಒಳಗಾಗುವವರಲ್ಲಿ ಎರಡು ವಿಧ: ಕೆಲಸಕ್ಕೆ ಹೋಗದೆ ಮನೆಗೆಲಸ ಮಾಡುವವರು. ಕೆಲಸಕ್ಕೆ ಹೋಗುತ್ತಲೇ ಗೃಹಿಣಿಯ ಪಾತ್ರವನ್ನು ನಿರ್ವಹಿಸುವವರು. ಮೊದಲನೆಯ ತರದ ಹೆಂಗಸರಿಗೆ ಆರ್ಥಿಕ ಅಭದ್ರತೆ ಸ್ವಾತಂತ್ರದ ಅಭದ್ರತೆ ತಮ್ಮ ವ್ಯಕ್ತಿತ್ವವನ್ನೇ ಮರೆತು ಬಿಡುವ ಅಭದ್ರತೆ. ಯಾವುದೇ ವಿಚಾರದಲ್ಲಿ ಇವರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುವ ಹಾಗಿಲ್ಲ. ನೂರಕ್ಕೆ ತೊಂಬತ್ತು ಮನೆಗಳಲ್ಲಿ ಗಂಡ ತಂದುದನ್ನು ಮಾತ್ರ ಹೆಣ್ಣು ಉಡಬೇಕು, ತೊಡಬೇಕು. ಅಲ್ಲದೆ ಕೆಲವು ಸಾರಿ ತಾವು ಮಾಡಿದ ಅಡಿಗೆಯನ್ನೇ ತೃಪ್ತಿಯಾಗಿ

ತಿನ್ನುವ ಸ್ವಾತಂತ್ರ್ಯ ಇರುವುದಿಲ್ಲ. ಅವಳು ಕುಳಿತರೂ ತಪ್ಪು, ನಿಂತರೂ ತಪ್ಪು, ಯಾವ ಸ್ವಾತಂತ್ರ್ಯವೂ ಇರುವುದಿಲ್ಲ. ಅಂಥವನ ನೆರಳಲ್ಲಿ ಭದ್ರತೆ ಕಾಣುವುದಾದರೂ ಹೇಗೆ?

ಇನ್ನು ಕೆಲಸಕ್ಕೆ ಹೋಗುವವರ ಪಾಡು ಬೇಡ. ಆರ್ಥಿಕವಾಗಿ ಸ್ವಾತಂತ್ರ್ಯ ಹೊಂದಿದ್ದರೂ ಅವಳು ದುಡಿದದ್ದನ್ನು ಕಿತ್ತು ತಿನ್ನುವುದಷ್ಟೇ ಅಲ್ಲದೆ, ಇಲ್ಲದ್ದನ್ನು ಬೆಳೆಸಿಕೊಂಡು ಮಾತು ಮಾತಿಗೂ ಹೀಯಾಳಿಸುತ್ತಾ ಅವಳ ಸಮಾನತೆಯನ್ನು ಸಹಿಸಲಾರದೆ, ಮನೆಯವರ ಮಾತುಗಳನ್ನು ಕೇಳಿ ಹಿಂಸೆ ಮಾಡುವ ಗಂಡಸರ ಸನಿಹದಲ್ಲಿ ಭದ್ರತೆಯಾದರೂ ಎಲ್ಲಿ? ನನ್ನ ಒಬ್ಬ ಸ್ನೇಹಿತೆ ತುಂಬಾ ಮುಗ್ಧ ಹುಡುಗಿ. ವರ್ಷಗಳಿಂದ ದುಡಿದು ಗಂಡನಿಗೆ ಕೊಡುತ್ತಲೇ ಇದ್ದಾಳೆ. ಅವನಿಗೆ ಎಲ್ಲ ತರದ ಅಭ್ಯಾಸಗಳ ಜೊತೆಗೆ ಹೆಂಗಸರನ್ನು ಮನೆಗೆ ಕರೆದು ತಂದು ಹೆಂಡತಿ ಎದುರಿಗೆ ಮಜಾ ಮಾಡುವ ಚಟ. ಇದಕ್ಕೆ ಆತನ ತಾಯಿ, ಅಕ್ಕ ತಂಗಿಯರ ಬೆಂಬಲ ಬೇರೆ. ಅವಳು ಆಫೀಸಿಗೆ ರಜೆ ಹಾಕಿ ಗಂಡನಿಗೆ ಬೇಕಾಗಿದ್ದನ್ನೂ, ಪಾನೀಯ, ಭೋಜನ ಸರಬರಾಜು ಮಾಡಬೇಕು. ಇದು ಅವಳ ಕೆಲಸ. ಇಲ್ಲದಿದ್ದರೆ ಮೈ ಕೈ ಊದುವ ಹಾಗೆ ಹೊಡೆತ. ಬೆಳೆದ ಮಕ್ಕಳು, ಅವರ ಪಾಡೇನು? ಅವಳಿಗೆ ತನ್ನವರು ಅಂತ ಯಾರೂ ಇಲ್ಲ. ಅವಳ ತಾಯಿ ತೀರಿಕೊಂಡ ಮೇಲೆ ಅವನ ಬೀಭತ್ಸ ನಡವಳಿಕೆಗಳು ಹೆಚ್ಚಾದವು. ಇಂತಹ ದರಿದ್ರರ ಜೊತೆಯಲ್ಲಿ ಭದ್ರತೆ ಏನು ಬಂತು? ಆ ಗೆಳತಿ ಇನ್ನೂ ನಲುಗಿ ಹೋಗುತ್ತಿದ್ದಾಳೆ.

ಮನೆಯೊಳಗೆ, ಹೊರಗೆ ಎಲ್ಲ ಕೆಲಸಗಳನ್ನು ನಿರ್ವಹಿಸಿ ನೆಮ್ಮದಿ ಇಲ್ಲದೆ ಬದುಕನ್ನು ಸಾಗಿಸುತ್ತಿರುವ ಹೆಣ್ಣುಗಳ ಕಂಬನಿ ಎಷ್ಟೋ! ಶೇ.10ರಷ್ಟು ಹೆಣ್ಣು ಹೃದಯದ ಗಂಡಂದಿರು ಇದ್ದರೂ ಶೇ. 90ರಷ್ಟು ಅಭದ್ರತೆಯನ್ನು ಕೊಡುವ ಮದುವೆಯ ಬಗ್ಗೆ ನಮ್ಮ ಹೆಣ್ಣು ಮಕ್ಕಳು ತುಂಬಾ ಮುದ್ದಾಗಿ "ನಮ್ಮ ಯಜಮಾನರಿಗೆ ತುಂಬಾ ಕೋಪಾರಿ, ಯಾವ ಕೆಲ್ಸಾ ಮಾಡೋದಕ್ಕೂ ಹೇಳಲ್ಲ, ಅವರೂ ಏನೂ ಸಹಾಯ ಮಾಡಲ್ಲ, ಸುಮ್ನೆ ಮಾತಿಗೆ ಮಾತು ಬೆಳೆಯುತ್ತೆ. ಇದೆಲ್ಲಾ ಯಾಕೇರಿ. ಅದಕ್ಕೆ ಅವರು ಹೊಡೆದ್ರೂ ಬೈದರೂ ಏನೂ ಮಾತಾಡೋಲ್ಲ. ರಾತ್ರಿಗೆ ಅವರೇ ಸರಿ ಹೋಗ್ತಾರೆ. ಎಲ್ಲಿಗೆ ಹೋಗ್ತಾರೇರಿ. ಅವರಿಗೆ ಮತ್ತೆ ಹೆಂಡತೀನೇ ಬೇಕಲ್ವೆ? ಮತ್ತೆ ಪುಸಲಾಯಿಸಿಕೊಂಡು ಬರ್ತಾರೆ. ಅದಕ್ಕೆ ನಾವೇ ಎಲ್ಲ ಅನುಸರಿಸಿಕೊಂಡು ಹೋಗ್ಬೇಕು ಬೇರೆ ಮಾತೇ ಇಲ್ಲ ಅಲ್ವಾ" ಅಂತ ತಮ್ಮ ಅಸಮರ್ಥತೆ ಅಸಹಾಯಕತೆಯನ್ನು ಸಮರ್ಥನೆಯ ಮುಖವಾಡ ಹಾಕಿ ಖುಶಿಯಿಂದ ಹೇಳಿಕೊಂಡು ಬಲವಂತದ ನಗೆಯನ್ನು ಮುಖದಲ್ಲಿ ಅರಳಿಸುವ ನಮ್ಮ ಹೆಣ್ಣುಮಕ್ಕಳ ಬದುಕು ದ್ವಂದ್ವದಲ್ಲಿ ಮುಳುಗಿ ಹೋಗಿದೆ. ಹೆಣ್ಣು ಮಕ್ಕಳು ಧೈರ್ಯ, ಆತ್ಮವಿಶ್ವಾಸ, ಸ್ವಾಭಿಮಾನ, ಸಮಯಕ್ಕೆ ತಕ್ಕ ತೀರ್ಮಾನ ತೆಗೆದುಕೊಳ್ಳುವ ಧೋರಣೆ ಬೆಳೆಸಿ ಕೊಂಡಾಗ ಮಾತ್ರ ಕೊಂಚ ಮಟ್ಟಿಗಾದರೂ ಭದ್ರತೆಯನ್ನು ಕಂಡು ಕೊಳ್ಳಲು ಸಾಧ್ಯವಾಗಬಹುದು. ಆದಷ್ಟು ಹೆಣ್ಣು ಮಕ್ಕಳು ಸಂಘಟಿತರಾಗಿ ಇತರ ಮಹಿಳೆಯರೊಂದಿಗೆ ಸಮಸ್ಯೆಗಳನ್ನು ಮುಕ್ತವಾಗಿ ಚರ್ಚಿಸಿ. ಸ್ವಲ್ಪ ಮಟ್ಟಿಗಾದರೂ ತಮಗೆ ಬೇಕಾದ್ದನ್ನು ಪಡೆದುಕೊಳ್ಳಬಹುದು.

■ *ಪುಷ್ಪ ಎಚ್.ಎಸ್.*

● ಈ ಪ್ರಶ್ನೆಯೆ ನನ್ನಲ್ಲಿ ಹಲವು ಪ್ರಶ್ನೆಗಳನ್ನು ಹುಟ್ಟು ಹಾಕಿತು. ಜೀವನದ ಭದ್ರತೆಗೆ ಸ್ತ್ರೀಯಡು ವಿವಾಹವಾಗಬೇಕೆ? ವಿವಾಹದ ಆಚೆ ಈ ಭದ್ರತೆ ಪಡೆಯಲು ಸಾಧ್ಯವಿಲ್ಲವೇ? ಆ ಭದ್ರತೆಯೆ ವಿವಾಹದ ನಂತರ ಮಹಿಳೆಯನ್ನು ಒಬ್ಬ ಅವಲಂಬಿತ ವ್ಯಕ್ತಿಯನ್ನಾಗಿಸುವುದಿಲ್ಲವೆ? ಪುರುಷನಿಂದ ಭದ್ರತೆ ಪಡೆಯುವುದರಿಂದ ಅವನಿಗೆ ಅಧೀನಳಾಗಿರಬೇಕಾಗುವುದಿಲ್ಲವೇ? ಈ ಭದ್ರತೆ ಯಾವ ರೂಪದಲ್ಲಿರುತ್ತದೆ? ಈ ಭದ್ರತೆ ಪುರುಷರಿಗೆ ಬೇಕಿಲ್ಲವೆ? ಇತ್ಯಾದಿ.

ಭದ್ರತೆಯೆಂದರೆ ಸಾಮಾಜಿಕ ಆರ್ಥಿಕ, ಹಾಗೂ ವೈವಾಹಿಕ ಭದ್ರತೆಯೂ ಸೇರಿದಂತೆ ದೈಹಿಕ ಹಾಗೂ ಮಾನಸಿಕ ಹಿಂಸೆಯಿಂದ ಮುಕ್ತಿ, ಹೊರಗಿನ ಆಕ್ರಮಣದಿಂದ ರಕ್ಷಣೆಯನ್ನು ಒಳಗೊಂಡಿರುತ್ತದೆ. ಈ ಭದ್ರತೆಯು ಹಿರಿಯರು ನಿಶ್ಚಯಿಸಿ ಮಾಡಿದ ಮದುವೆಯೋ ಅಥವಾ ಪ್ರೀತಿಸಿ ಆದ ಮದುವೆಯೋ ಅನ್ನುವುದನ್ನು ಅವಲಂಬಿಸಿರುತ್ತದೆ. ಹಿರಿಯರು ಮಾಡಿದ ಮದುವೆಯಲ್ಲಿ ಈ ಎಲ್ಲಾ ಭದ್ರತೆಗಳಿಗೆ ಗ್ಯಾರಂಟಿ ಅನ್ನುವ ಭಾವನೆಯಿದೆ. ಆದುದರಿಂದಲೇ ಈಗಿನ ಹುಡುಗ ಹುಡಿಗಿಯರು ತಂದೆ ತಾಯಿ ನಿಶ್ಚಯಿಸಿದ ಮದುವೆಗೆ ಹೆಚ್ಚು ಒಲವು ತೋರಿಸುತ್ತಾರೆ. ಪ್ರೀತಿಸಿ ಆದ ಮದುವೆಯಲ್ಲಿ ಭದ್ರತೆ ಅನಿಶ್ಚಿತವಾಗಿರುತ್ತದೆ.

ಭದ್ರತೆಯ ದೃಷ್ಟಿಯಿಂದ ನನ್ನ ಸುತ್ತಮುತ್ತಲಿನ ಸಂಬಂಧಿಕರು, ಸ್ನೇಹಿತರು ಹಾಗೂ ಪರಿಚಯದವರ ಸೀಮಿತ ಚೌಕಟ್ಟಿನಲ್ಲಿ ಅಭದ್ರತೆಯಿಂದ ತೊಳಲುತ್ತಿರುವ ಮಹಿಳೆಯರ ಉದಾಹರಣೆಗಳು ಕಂಡು ಬರುತ್ತವೆಯೇ ಎಂದು ನೋಡಿದಾಗ ಒಂದು ಉದಾಹರಣೆಯೂ ಕಂಡು ಬರಲಿಲ್ಲ. ಆಗ ಓಹೋ ಖಂಡಿತ ವಿವಾಹ ಸ್ತ್ರೀಯರಿಗೆ ಭದ್ರತೆ ನೀಡುತ್ತಿದೆ ಅನ್ನಿಸಿತು. ಆದರೂ ನಿಜವಾಗಿಯೂ ವಿವಾಹ ಸ್ತ್ರೀಯರಿಗೆ ಭದ್ರತೆ ನೀಡುತ್ತಿದೆಯೇ?

ಯಾವ ರೀತಿಯ ಭದ್ರತೆ ನೀಡುತ್ತಿದೆ? ಭದ್ರತೆಯನ್ನು ಪಡೆಯುವುದಕ್ಕೋಸ್ಕರ ಹೆಂಗಸರು ಏನು ಮಾಡಬೇಕು; ಏನೆಲ್ಲ ತ್ಯಾಗಮಾಡಬೇಕು? ಎಂಬ ಪ್ರಶ್ನೆಗಳು ಎದ್ದವು.

ನಾನು ಕಂಡ ಹೆಚ್ಚಿನ ವಿವಾಹಗಳು ಹಿರಿಯರು ನಿಶ್ಚಯಿಸಿದವು, ಮೇಲು ನೋಟಕ್ಕೆ ಈ ವಿವಾಹವು ಹೆಂಗಸರಿಗೆ ಭದ್ರತೆಯನ್ನು ಕೊಟ್ಟಿರುವಂತೆ ಕಂಡು ಬರುತ್ತದೆ. ಆದರೆ ಇದಕ್ಕಾಗಿ ಅವರು ಏನೆಲ್ಲ ಮಾಡಬೇಕಾಗುತ್ತದೆ. ಎಷ್ಟು ಹೊಂದಾಣಿಕೆ, ತ್ಯಾಗ, ಸಹನೆ, ತಾಳ್ಮೆ ತೋರಿಸಬೇಕಾಗುತ್ತದೆ ಎಂದರೆ, ಉದ್ಯೋಗಸ್ಥರಾಗಿದ್ದರೆ ಮನೆಕೆಲಸ ಮತ್ತು ಹೊರಗಿನ ಕೆಲಸ ಎರಡನ್ನು ಸರಿದೂಗಿಸಿಕೊಂಡು ಹೋಗಬೇಕು. ಹಣದ ವಿಚಾರದಲ್ಲಿ ಸಂಪೂರ್ಣ ಸ್ವಾತಂತ್ರ್ಯ ಇಟ್ಟುಕೊಳ್ಳಬಾರದು. ಗಂಡ ಮತ್ತು ಅತ್ತೆ ಮಾವನ ಮಾತುಗಳಿಗೆ ವಿಧೇಯಳಾಗಿರಬೇಕು. ಹೊರಗಿನ ಚಟುವಟಿಕೆಗಳಲ್ಲಿ ಹೆಚ್ಚು ಭಾಗವಹಿಸಬಾರದು. ನೆಂಟರು, ಅತಿಥಿಗಳು ಬಂದರೆ ಚೆನ್ನಾಗಿ ನೋಡಿಕೊಳ್ಳಬೇಕು. ತನ್ನೆಲ್ಲ ಇಚ್ಛೆಗಳನ್ನು ಕುಟುಂಬದ ಹಿತಾಸಕ್ತಿಗೆ ತ್ಯಾಗ ಮಾಡಬೇಕು. ಮಕ್ಕಳ ಪಾಲನೆಯಲ್ಲಿ ಕುಂದಿರಬಾರದು ಹೀಗೆ ಹತ್ತು ಹಲವು ನಿರೀಕ್ಷೆಗಳನ್ನು ಪೂರೈಸಿದರೆ ಅವಳ ಜೀವನ ಭದ್ರತೆಗೆ ಧಕ್ಕೆಯಿಲ್ಲ. ಇವುಗಳಲ್ಲಿ ಯಾವುದಾದರೂ ಒಂದನ್ನು ಪಾಲಿಸದಿದ್ದರೂ ಅವಳ ವೈವಾಹಿಕ ಭದ್ರತೆ ಮುರಿದು ಬಿತ್ತು ಅಂತಲೇ ಲೆಕ್ಕ. ಇದಕ್ಕೆ ಅವಕಾಶ ಮಾಡಿಕೊಡಬಾರದೆಂದು ನಮ್ಮ ಹೆಣ್ಣು ಮಕ್ಕಳು ಹೊಂದಾಣಿಕೆ ಮಾಡಿಕೊಂಡು ಸಹನೆ ತ್ಯಾಗ ತೋರಿಸುವುದರಿಂದ ವಿವಾಹವು ಭದ್ರತಾ ವ್ಯವಸ್ಥೆಯಾಗಿ ಹೊರನೋಟಕ್ಕೆ ಕಂಡು ಬರುತ್ತದೆ.

ಎಷ್ಟೋ ಜನ ಉದ್ಯೋಗಸ್ಥ ಹೆಣ್ಣು ಮಕ್ಕಳು ವಿವಾಹದ ನಂತರ ಸ್ವತಂತ್ರವಾಗಿ ಕುಟುಂಬದ ನಿರ್ವಹಣೆ ಮಾಡುತ್ತಿದ್ದರೂ (ಕುಡುಕ ಗಂಡ, ಕೆಲಸವಿಲ್ಲದ ಗಂಡ, ಬೇಜವಬ್ದಾರಿ ಗಂಡಂದಿರಿಂದ) ವಿವಾಹವು ತಮಗೆ ಭದ್ರತೆ ನೀಡುತ್ತಿದೆ ಅನ್ನುವ ಭ್ರಮೆಯಲ್ಲಿರುತ್ತಾರೆ. ಗಂಡ ಹಣ ಹೇಗೆ ಸಂಪಾದಿಸುತ್ತಾನೆ ಎಂದು ಪ್ರಶ್ನಿಸದೆ ಗಂಡನಿಗೆ ತೊಂದರೆಯಾಗದಂತೆ ಕುಟುಂಬದ ಎಲ್ಲಾ ಹೊರೆಯನ್ನು ಸಂತೋಷವಾಗಿ ಹೊತ್ತು, ಗಂಡ ದುಡಿದರು ದುಡಿಯದಿದ್ದರೂ ಗಂಡ ಎಂದು ಹೆಚ್ಚಿನ ಗೌರವ ನೀಡುತ್ತಾ, ಅವನ ಅಭಿಮಾನಕ್ಕೆ ಧಕ್ಕೆ ಬರದಂತೆ ನಡೆದು ಕೊಂಡರೆ ಹಾಗು ಕಾನೂನು ಬಾಹಿರವಾಗಿ ಇನ್ನೊಂದು ಹೆಂಗಸಿನ ಸಂಬಂಧ ಇಟ್ಟುಕೊಂಡರೂ ಸಹಿಸಿಕೊಂಡು ಒಪ್ಪಿಕೊಳ್ಳುವುದು, ಹಿಂತಿರುಗಿ ಮಾತನಾಡದೆ, ಅವನಿಗಿಂತ ಹೆಚ್ಚಿನ ಬುದ್ಧಿವಂತಿಕೆಯನ್ನು ತೋರಿಸದೆ ಎಂದೂ ಮುಗಿಯದ ಹೊಂದಾಣಿಕೆ ನಡೆಸಿಕೊಂಡು ಹೋದರೆ ಖಂಡಿತ ವಿವಾಹ ಭದ್ರತೆಯನ್ನು ನೀಡುತ್ತದೆ.

ಅದೃಷ್ಟವೋ ದುರಾದೃಷ್ಟವೋ ನಮ್ಮ ಹೆಣ್ಣುಮಕ್ಕಳನ್ನು ಈ ಪುರುಷ ಪ್ರಧಾನ ವಿವಾಹ ವ್ಯವಸ್ಥೆಗೆ ತಕ್ಕಂತೆ ಸಮಾಜೀಕರಿಸುವುದು ಕಂಡು ಬರುತ್ತದೆ. ಜೊತೆಗೆ ವಿವಾಹದ ಆಚೆಗಿನ ಜೀವನವು ಹೆಣ್ಣುಮಕ್ಕಳಿಗೆ ಸಾಕಷ್ಟು ಭದ್ರತೆಯನ್ನು ಒದಗಿಸದಿರುವುದರಿಂದ ವಿವಾಹವೇ ಹೆಚ್ಚು ಸುರಕ್ಷಿತ ಅನ್ನುವ ಭಾವನೆ ತಂದೆ ತಾಯಿ ಹಾಗೂ ಹೆಣ್ಣು ಮಕ್ಕಳಲ್ಲೂ ಕಂಡು ಬರುತ್ತದೆ.

ಪ್ರತಿಕಾ ವರದಿ, ಕೌಟುಂಬಿಕ ನ್ಯಾಯಾಲಯ ಹೆಲ್ಪ್‌ಲೈನ್, ಕೌನ್ಸಿಲಿಂಗ್ ಸೆಂಟರ್, ಸ್ವಯಂ ಸೇವಾ ಸಂಘಗಳಿಗೆ ಮಹಿಳೆಯರು ತರುವ ದೂರುಗಳನ್ನು ನೋಡಿದರೆ ವಿವಾಹವು ಹೆಂಗಸರಿಗೆ ಭದ್ರತೆಯನ್ನು ನೀಡುತ್ತಿಲ್ಲ ಅನ್ನಿಸುತ್ತದೆ. ದ್ವಿಪತ್ನಿತ್ವದಿಂದ ಇಬ್ಬರು ಹೆಂಗಸರು ಅಭದ್ರತೆಯಿಂದ ನರಳುತ್ತಿರುತ್ತಾರೆ. ವರದಕ್ಷಿಣೆ, ಸಂಶಯ, ಗಂಡನ ವಿಕೃತ ಮನೋಭಾವ, ಗಟ್ಟಿತನ, ಸ್ವಾಭಿಮಾನ ಹಾಗೂ ಧೈರ್ಯದಿಂದ ಕೋಡಿದ ಹೆಂಡತಿಯರನ್ನು ಕುರಿತು ಗಂಡದಿರಿಗಿರುವ ಅಸಮಾಧಾನ, ಗಂಡನ ಆಕಸ್ಮಿಕ ಮರಣ, ಅಸ್ತಿಗಾಗಿ ಸಂಬಂಧಿಕರ ಕಿರುಕುಳ, ಕುಡುಕ ಗಂಡನ ಹಿಂಸೆ, ಸೋಮಾರಿ ಬೇಜವಬ್ದಾರಿ ಗಂಡನ ನಡವಳಿಕೆ, ಬಡತನ ಇವೆಲ್ಲ ಮಹಿಳೆಯರಿಗೆ ವೈವಾಹಿಕ ಭದ್ರತೆಯನ್ನು ನೀಡದಿದ್ದರೂ ನಮ್ಮ ಮಹಿಳೆಯರು ವಿವಾಹದೊಳಗೆ ಭದ್ರತೆಯನ್ನು ಪಡೆಯಲು ಹೋರಾಡುತ್ತಿರುವುದನ್ನು ಕಾಣುತ್ತೇವೆ. ಅನೇಕ ಸಲ ಮಕ್ಕಳ ಸಲುವಾಗಿ ಹೆಂಗಸರಿಗೆ ಭದ್ರತೆ ದೊರಕುತ್ತದೆ.

ವಿವಾಹವೇ ಹೆಣ್ಣಿನ ಜೀವನದ ಗುರಿ, ಹೆಣ್ಣು ಯಾವಾಗಲು ಗಂಡಿನ ಅಶ್ರಯದಲ್ಲೇ ಇರಬೇಕೆಂಬ ನಂಬಿಕೆ, ವಿವಾಹ ಬಿಟ್ಟು ಸ್ತ್ರೀಗೆ ಪರ್ಯಾಯ ಜೀವನ ವ್ಯವಸ್ಥೆ ಇಲ್ಲದಿರುವುದು ಹಾಗೂ ಅಸುರಕ್ಷಿತ ಸಾಮಾಜಿಕ ವ್ಯವಸ್ಥೆ ಹೆಣ್ಣು ಮಕ್ಕಳು ವಿವಾಹದೊಳಗೆ ಭದ್ರತೆಯನ್ನು ಪಡೆಯಲಾಗದಿದ್ದರು ಪಡೆಯುತ್ತಿದ್ದೇವೆ ಪಡೆಯುತ್ತೇವೆ ಅನ್ನುವ ಭ್ರಮೆಗೊಳಪಟ್ಟಿರುವುದು ಕಂಡು ಬರುತ್ತದೆ. ಅಥವಾ ಅನಿವಾರ್ಯವಾಗಿ ಒಪ್ಪಿಕೊಳ್ಳುವಂತೆ ಮಾಡುತ್ತವೆ.

■ *ಹೇಮಲತ ಎಚ್. ಎಮ್*
ಮೈಸೂರು

*ಮಾನಸದ ಪ್ರಕಟಣೆ ಮಾನಸದ ಓದುಗರ ಆರ್ಥಿಕ ನೆರವನ್ನು ಅವಲಂಬಿಸಿದೆ. ಓದುಗರು ಚಂದಾ ನವೀಕರಣದ ಸೂಚನೆ ಬಂದ ಕೂಡಲೇ ಚಂದಾ ನವೀಕರಿಸಿ ಸಹಕರಿಸಬೇಕೆಂದು ಕೋರುತ್ತೇವೆ.*
*–ಸಂ. ಮಂಡಳಿ*

# ಪೋಟಾ-ನಾವೇಕೆ ವಿರೋಧಿಸಬೇಕು?

1995ರಲ್ಲಿ ಟಾಡಾ ರದ್ದಾಯಿತು; ಆದರೆ ಅಂದಿನಿಂದಲೇ ಅಂಥದೇ ಭಯೋತ್ಪಾದನಾ ವಿರೋಧಿ ಕಾನೂನೊಂದನ್ನು ಜಾರಿಗೆ ತರಲು ಸರಕಾರ ಪ್ರಯತ್ನಿಸುತ್ತಾ ಬಂತು. ಟಾಡಾ ಕಾಯಿದೆಯಡಿ 76,000ಕ್ಕಿಂತಲೂ ಹೆಚ್ಚು ಮಂದಿ ಬಂಧಿತರಾಗಿದ್ದರು. ಇಂದೂ ಕೂಡ ಎಷ್ಟೋ ಮಂದಿ ವಿಚಾರಣೆಯನ್ನೆದುರಿಸುತ್ತಲೇ ಇದ್ದಾರೆ. ಟಾಡಾ ಒಂದು ಕಾನೂನುಬದ್ಧ ಹಿಂಸೆಯಾಗಿತ್ತು; ಅಂಥ ಕಾನೂನುಗಳನ್ನು ಜಾರಿಗೊಳಿಸುವುದರ ವಿರುದ್ಧ ಪ್ರತಿಭಟನೆಗಳು ನಡೆದಿದ್ದವು; ಈಗಲೂ ನಡೆಯುತ್ತಿವೆ. ಸೇವಾ ನಿರತ ಪೊಲೀಸು ಅಧಿಕಾರಿಗಳು, ನಿವೃತ್ತ ಪೊಲೀಸು ಪೇದೆಗಳು, ಅಧಿಕಾರಶಾಹಿಗಳು ಮತ್ತು ಅಧಿಕಾರದಲ್ಲಿರುವ ಪಕ್ಷಗಳು ಅಂಥ ಕಾನೂನುಗಳ ಪರವಾಗಿ ಜೋರಾಗಿ ವಾದಿಸುತ್ತಿವೆ. 1995-1999ರ ಅವಧಿಯಲ್ಲಿ ಅಪರಾಧ ಕಾಯಿದೆ ತಿದ್ದು ಪಡಿ ಮಸೂದೆ (Criminal Law Amendment Bill-CLA) ಮತ್ತು 2000 ಇಸವಿಯಲ್ಲಿ ಭಯೋತ್ಪಾದನಾ ಪ್ರತಿಬಂಧಕ ಮಸೂದೆ (Prevention of Terrorism-POT) ಗಳನ್ನು ಜಾರಿಗೊಳಿಸಲು ಸರಕಾರ ಯತ್ನಿಸಿತು. ಅಂಥದೇ ಕಾನೂನುಗಳನ್ನು ಜಾರಿಗೊಳಿಸುವಂತೆ ರಾಜ್ಯ ಸರಕಾರಗಳಿಗೆ ತಿಳಿಸಿತ್ತು. ಇತ್ತೀಚಿನ ವರ್ಷಗಳಲ್ಲಿ ಭದ್ರತಾ ಪಡೆಗಳಿಂದ ಮಾನವ ಹಕ್ಕುಗಳ ಉಲ್ಲಂಘನೆಯ ಪ್ರಕರಣಗಳು ಹೆಚ್ಚುತ್ತಿದ್ದಾಗಲೇ ಪೊಲೀಸರು ಮತ್ತು ಭದ್ರತಾ ಪಡೆಗಳಿಗೆ ಕ್ಷಮಾದಾನದ ಆಶ್ವಾಸನೆ ನೀಡುವುದರಲ್ಲಿ ಗೃಹಮಂತ್ರಿಗಳು ತಲ್ಲೀನರಾಗಿದ್ದರು. ಪೋಟಾ ಜಾರಿಗೆ ತರಲು ಸೆಪ್ಟೆಂಬರ್ 11 ಒಂದು ಅತ್ಯಂತ ಒಳ್ಳೆಯ ಅವಕಾಶವಾದೀ ನೆಪವಾಗಿತ್ತು.

ಟಾಡಾ ಮೂಲಕ ಪೊಲೀಸರು ಪಡೆದುಕೊಂಡ ಅಮಲೇರಿಸುವ ಅಧಿಕಾರದ ಬಗ್ಗೆ ಅಥವಾ ನ್ಯಾಯಾಂಗಕ್ಕೆ ವ್ಯವಸ್ಥಿತವಾಗಿ ಅಡ್ಡಿಯುಂಟುಮಾಡಲು ಕಾರ್ಯಾಂಗಕ್ಕೆ ಹೇಗೆ ಅವಕಾಶವನ್ನು ನೀಡಲಾಗಿತ್ತೆನ್ನುವುದರ ಬಗ್ಗೆ ಚರ್ಚೆಯಾಗಲಿಲ್ಲ; ಭಯೋತ್ಪಾದನೆಯ ಹೆಸರಿನಲ್ಲಿ ಪ್ರತಿಭಟನೆಗಳ ವಿರುದ್ಧ ಟಾಡಾವನ್ನು ಉದ್ದೇಶಪೂರ್ವಕವಾಗಿ ಹೇಗೆ ಬಳಸಿಕೊಳ್ಳಲಾಯಿತೆನ್ನುವುದರ ಬಗೆಗೂ ಚರ್ಚೆಯಾಗಲಿಲ್ಲ.

ಟಾಡಾದಂತೆಯೇ ಪೋಟಾ (Pota) ಹೊಸದಾದ ನ್ಯಾಯಾಂಗೀಯ ವಿಧಿವಿಧಾನಗಳನ್ನು ಹೊಂದಿದೆ—ಬಂಧನದ ಅವಧಿಯ ವಿಸ್ತರಣೆ, ಪೊಲೀಸರೆದುರು ಮಾಡಿಕೊಂಡ ತಪ್ಪೊಪ್ಪಿಗೆಗೆ ಮಾನ್ಯತೆ; ಜಾಮೀನಿನ ಮೇಲಿನ ಬಿಡುಗಡೆಯ ಕಡಿಮೆ ಸಾಧ್ಯತೆ, ಶಿಕ್ಷೆಯ ಅವಧಿಯ ವಿಸ್ತರಣೆ, ಆರೋಪಿಯ ವಿರುದ್ಧ ಪಕ್ಷಪಾತೀಯವಾದ ವಿಚಾರಣಾ ವಿಧಿವಿಧಾನಗಳು. ಈ ಕಾನೂನು ದುರ್ಬಳಕೆಯಾಗದಂತೆ ಹೆಚ್ಚಿನ ರಕ್ಷಣಾವಕಾಶಗಳಿವೆ ಎಂದು ಭಾವಿಸಲಾಗಿದೆ.

ಈಗ ಅಥವಾ ಈ ಮೊದಲು ಜಾರಿಗೆ ತಂದ ಪೋಟಾ ಅಥವಾ ಟಾಡಾ ಅಥವಾ ಸಿ.ಎಲ್. ಎ ಅಥವಾ ಪಾಟ್ ಮಸೂದೆಯಂಥ ಯಾವುದೇ ಭಯೋತ್ಪಾದನಾ ವಿರೋಧಿ ಕಾನೂನುಗಳನ್ನು ನಾವು ವಿರೋಧಿಸಬೇಕು. ಏಕೆಂದರೆ,

1. ಯಾವುದೇ ಒಬ್ಬ ವ್ಯಕ್ತಿ ತಪ್ಪಿತಸ್ಥ/ಳು ಎಂದು ಸಾಬೀತಾಗುವವರೆಗೆ ಅವನ/ಳನ್ನು ನಿರಪರಾಧಿಯೆಂದೇ ಭಾವಿಸಬೇಕೆನ್ನುವ ಮೂಲತತ್ವವನ್ನು ಭಯೋತ್ಪಾದನಾ ವಿರೋಧೀ ಕಾನೂನುಗಳು ನಿರಾಕರಿಸುತ್ತವೆ. ತಾನು ನಿರಪರಾಧಿಯೆಂದು ಸಾಬೀತಾಗುವವರೆಗೆ ಆರೋಪಿಯು ಅಪರಾಧಿಯಾಗಿರುತ್ತಾನೆ/ಳೆ ಎನ್ನುವುದೇ ಈ ಕಾನೂನುಗಳ ಆಧಾರ ಹೇಳಿಕೆಯಾಗಿದೆ.

ಸಾಂಘಿಕ ಹಕ್ಕು, ವಾಕ್ ಸ್ವಾತಂತ್ರ್ಯ, ಬದುಕಿನ ಹಕ್ಕು ಮುಂತಾದ ಚಾಲ್ತಿಯಲ್ಲಿರುವ ಕಾನೂನುಗಳ ಪರಿಧಿಯಲ್ಲಿ ಬರುವ ಹಕ್ಕುಗಳನ್ನು ತಿರಸ್ಕರಿಸುವುದನ್ನೇ ಇವು ತಮ್ಮ ಗುರಿಯನ್ನಾಗಿಸಿಕೊಂಡಿವೆ. ಕಾನೂನಿನ ಮುಂದೆ ಎಲ್ಲರೂ ಸಮಾನರು ಎನ್ನುವ ತತ್ವವನ್ನು ತನ್ನ ಕ್ರೂರ ವಿಧಿ ವಿಧಾನಗಳ ಮೂಲಕ ತಿರಸ್ಕರಿಸುತ್ತದೆ. ಮೂಲಭೂತ ಹಕ್ಕುಗಳನ್ನು ಕಡೆಗಣಿಸುವ ಆಧಾರ ಹೇಳಿಕೆಯನ್ನು ಹೊಂದಿರುವ ಯಾವುದೇ ಕಾನೂನು ಕ್ರೂರವಾಗಿರುತ್ತದೆ.

2. ಅವು ನಿರಂಕುಶ ಮಾನದಂಡಗಳು ಮತ್ತು ಕ್ಷಿಪ್ರವಿಚಾರಣೆಯ ವಿಧಿ ವಿಧಾನಗಳನ್ನಾಧರಿಸಿದ ಒಂದು ಅಪರಾಧ ನ್ಯಾಯದ ಅತ್ಯಂತ ಕೆಟ್ಟದಾದ ಸಮಾನಾಂತರ ವ್ಯವಸ್ಥೆಯನ್ನು ಹುಟ್ಟುಹಾಕುತ್ತವೆ. ಕಾರ್ಯಾಂಗ ಮತ್ತು ನ್ಯಾಯಾಂಗಗಳು ಇತ್ತೀಚೆಗೆ ಅಸಮರ್ಥ, ಭಾವನಾರಹಿತ, ಭ್ರಷ್ಟ ಮತ್ತು ಪಕ್ಷಪಾತೀಯವಾಗಿವೆಯೆಂದು ಹೇಳುವವರೇ ಅಂಥ ಕಾನೂನುಗಳ ಪರವಾಗಿ ವಾದಿಸುತ್ತಾರೆ. ಅಂಥ ಕಾನೂನುಗಳು ಈ ಸಂಸ್ಥೆಗಳನ್ನು ಸುಧಾರಣೆ ಮಾಡುವ ಬದಲಿಗೆ ಅಧಿಕಾರಿಗಳ ಅಧಿಕಾರವನ್ನು ವಿಸ್ತರಿಸುತ್ತವೆ; ಅವರಿಗೆ ಈಗಿರುವ ಅಡೆತಡೆಗಳನ್ನು ನಿವಾರಿಸುತ್ತವೆ

3. ಭಯೋತ್ಪಾದನಾ ವಿರೋಧಿ ಕಾನೂನುಗಳು,

ಹೆಚ್ಚುತ್ತಿರುವ ವಿರೋಧ ಮತ್ತು ಭಿನ್ನಮತಗಳನ್ನು ಹತ್ತಿಕ್ಕುವ ರಾಜಕೀಯ ಅಸ್ತ್ರಗಳಾಗಿವೆ. ಪರಿಭಾಷೆಯಲ್ಲಿನ ಅಸ್ಪಷ್ಟತೆ, ಶಿಕ್ಷೆಯ ಹೆಚ್ಚಳ ಮತ್ತು ಕಠಿಣ ವಿಧಿ–ವಿಧಾನಗಳು ಅಧಿಕಾರಾರೂಢ ರಾಜಕೀಯ ಪಕ್ಷಗಳು ಹಾಗೂ ಸ್ಥಳೀಯ ಕಾರ್ಯಾಂಗದ ಅಧಿಕಾರಿಗಳು ರಾಜಕೀಯ ವಿರೋಧವನ್ನು "ಭಯೋತ್ಪಾದಕ ಅಪರಾಧಗಳು" ಎಂದು ಪರಿಗಣಿಸಲು ದಾರಿ ಮಾಡಿಕೊಡುತ್ತವೆ.

4 ಸ್ಪಷ್ಟವಾದ ಹಿಂಸಾಕೃತ್ಯಗಳನ್ನು ಈಗಿರುವ ಕಾನೂನುಗಳ ಪರಿಧಿಯಲ್ಲೇ ತರಬಹುದು. ಉದಾಹರಣೆಗೆ, ರಾಜೀವಗಾಂಧಿ ಪ್ರಕರಣಕ್ಕೆ ಟಾಡಾ ಕಾಯಿದೆ ಅನ್ವಯಿಸುದಿಲ್ಲ ವೆಂದಾಯಿತು; ಕೊನೆಗೆ ಭಾರತೀಯ ಅಪರಾಧ ದಂಡ ಸಂಹಿತೆಯನ್ವಯ ಕೊಲೆ ಅಪರಾಧಕ್ಕಾಗಿ ಅಪರಾಧಿಗಳಿಗೆ ಶಿಕ್ಷೆ ವಿಧಿಸಲಾಯಿತು. ಟಾಡಾದಂಥ ಕಾನೂನುಗಳು ತಮ್ಮ ವಿಸ್ತಾರ ಮತ್ತು ಅಸ್ಪಷ್ಟತೆಗಳಿಂದಾಗಿ ನಾಗರಿಕರಿಗೆ ಕಿರುಕುಳ ನೀಡುವ ಅಬಾಧಿತವಾದ ಅಧಿಕಾರವನ್ನು ಮಾತ್ರ ಪೊಲೀಸರಿಗೆ ನೀಡುತ್ತವೆ.

ಒಟ್ಟಿನಲ್ಲಿ ಹೇಳುವುದಾದರೆ, ಅವುಗಳ ಉದ್ದೇಶ ಪ್ರಜಾಪ್ರಭುತ್ವ ವಿರೋಧಿಯಾಗಿದ್ದರೆ, ವಿಷಯ ಹಾನಿಕರ ವಾಗಿರುತ್ತದೆ. ಇದರ ಪರಿಣಾಮವಾಗಿ ನಮ್ಮ ರಾಜಕೀಯ ವ್ಯವಸ್ಥೆ ಅಧಃ ಪತನದತ್ತ ಸಾಗುತ್ತದೆ.

ನಾಗರಿಕ ಮತ್ತು ಪ್ರಜಾಪ್ರಭುತ್ವದ ಹಕ್ಕುಗಳಿಗಾಗಿಯೇ ಇರುವ ಸಂಸ್ಥೆಗಳು ಅಂಥ ಕಾನೂನುಗಳನ್ನು ವಿರೋಧಿಸುವ ಮೂಲಕ ರಾಷ್ಟ್ರವಿರೋಧಿ ಚಟುವಟಿಕೆಗಳನ್ನು ಬೆಂಬಲಿಸುತ್ತವೆಂದು ಸಾಮಾನ್ಯವಾಗಿ ವಾದಿಸುತ್ತಾರೆ. ಈ ಸರ್ಕಾರದ ಶಬ್ದ ಭಂಡಾರವನ್ನೇ ಬಳಸಬೇಕೆಂದರೆ, ಯಾರು ಸರಕಾರದ ಜೊತೆಗಿಲ್ಲವೋ ಅವರು ಭಯೋತ್ಪಾದಕರ ಜೊತೆಗಿರುತ್ತಾರೆಂದು ನಂಬಲಾಗುತ್ತದೆ. ಆದರೆ ನಿರಪರಾಧಿಗಳ ಮೇಲೆ ನಡೆಯುವ ಅಪರಾಧಗಳನ್ನು ಬೆಂಬಲಿಸುವ ಸಿದ್ಧಾಂತಗಳು ಪ್ರಜಾಪ್ರಭುತ್ವ ವಿರೋಧಿ ಮಾತ್ರವಲ್ಲ, ಖಂಡನಾರ್ಹ ಕೂಡ. ನ್ಯಾಯಾಲಯಗಳು ಅಂಥ ಅಪರಾಧಗಳನ್ನು ತಡೆಗಟ್ಟಬಲ್ಲವೆ? ಕಾನೂನು ಮತ್ತು ಶಿಸ್ತುಗಳು ಭಯೋತ್ಪಾದನೆಯ ಬೇರುಗಳನ್ನು ಕೀಳಬಲ್ಲವೆ? ಆ ಬೇರುಗಳು ಸಾಮಾಜಿಕ-ರಾಜಕೀಯದ್ದಾಗಿರುತ್ತವೆ. ಅವುಗಳನ್ನು ರಾಜಕೀಯ ಸವಾಲುಗಳೆಂದು ಪರಿಗಣಿಸಬೇಕೇ ಹೊರತು ಕಾನೂನು ಮತ್ತು ಶಿಸ್ತಿನ ಸಮಸ್ಯೆಯಲ್ಲ. ಟಾಡಾ ಅವಧಿಯ ಅನುಭವಗಳನ್ನು ನಾವು ಮರೆಯಬಾರದು. ಮತೀಯ ಸ್ವಭಾವ, ಆಯ್ಕೆಯ ಗುಣ ಮತ್ತು ಇಚ್ಛಾನುಸಾರ ಬಳಕೆಯ ಕಾನೂನೊಂದನ್ನು ಪ್ರತಿಬಂಧಕ ಕಾನೂನೆಂದು ಕರೆದು ತಮಗೆ ಅನುಕೂಲಕರವಾಗಿರದ ಜನ, ಗುಂಪು, ಪಕ್ಷ ಮತ್ತು ಪ್ರತಿಭಟನೆಗಳ ವಿರುದ್ಧ ಬಳಕೆ ಮಾಡಿಕೊಂಡ ಆ ವಿಶೇಷ ಕಾನೂನು ಪರಿಧಿಯಲ್ಲಿ ಜನಸಾಮಾನ್ಯರು ಅನುಭವಿಸಿದ ಅಪಾರ ಬೆದರಿಕೆ-ಹಿಂಸೆಗಳ ಅನುಭವಗಳು ದಾಖಲಾಗಿವೆ. ಅದು "ಭಯೋತ್ಪಾದಕ" ಅಪರಾಧಗಳನ್ನು ಬೇರು ಸಹಿತ ಕಿತ್ತೊಗೆಯುವ ಬದಲಿಗೆ ಪ್ರಭುತ್ವದ ಭಯೋತ್ಪಾದನೆಯನ್ನು ಕಾನೂನು ಬದ್ಧಗೊಳಿಸಿತು.

ಈಗ ಸದ್ದಿಲ್ಲದೆ ನಮ್ಮ ನಡುವೆ ಬಂದಿರುವ ಪೋಟಾದ ಜಾರಿಯ ಪ್ರಕ್ರಿಯೆಯಲ್ಲಿ ಕಳ್ಳತನ ಮತ್ತು ಅತ್ಯಂತ ಗೋಪ್ಯತೆ ಗಳಿದ್ದವು. ಅದಕ್ಕೆ ರಾಷ್ಟ್ರಾಧ್ಯಕ್ಷರ ಒಪ್ಪಿಗೆ ದೊರೆಯುವವರೆಗೆ ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗದಂಥ ಸರಕಾರಿ ಸ್ವಾಮ್ಯದ ಸಂಸ್ಥೆಗಳ ಬಳಿ ಅದರ ಕರಡು ಪ್ರತಿಯೂ ಇರಲಿಲ್ಲ. ಜನರಿಗೆ ಟಾಡಾ ಅನುಭವಗಳ ನೆನಪಿರಬಹುದು; ಅವರು ಟಾಡಾದಂಥ ಇನ್ನೊಂದು ಭಯೋತ್ಪಾದಕ ಶಾಸನದ ಮೂಲಕ ಭಯೋತ್ಪಾದನೆಗೊಳಗಾಗಲು ಅವಕಾಶ ಕೊಡಲಾರರೆಂಬ ವಾಸ್ತವದ ಅರಿವು ಸರಕಾರಕ್ಕಿದ್ದಿರಬಹುದು.

### ಭಯೋತ್ಪಾದಕರು ಯಾರು?

ಟಾಡಾದ ಒಂದು ದಶಕದ ಇತಿಹಾಸವೆಂದರೆ ಅದರ ಪ್ರಭಾವ/ ಪರಿಣಾಮಗಳನ್ನು ಕುರಿತಂತೆ ಪಾರ್ಲಿಮೆಂಟಿನಲ್ಲಿ ಚರ್ಚೆಯ ಕೊರತೆ ಇತ್ತು. ಟಾಡಾ ಎರಡು ವರ್ಷಗಳ ಅವಧಿಯದಾಗಿತ್ತು. ಪೋಟೊ 3 ವರ್ಷಗಳ ಅವಧಿಯದಾಗಿದೆ. ಅಂದ ಮೇಲೆ ಪರಿಸ್ಥಿತಿ ಮತ್ತಷ್ಟು ಗಂಭೀರದ್ದಾಗಿ ಬಿಡುತ್ತದೆ. ಟಾಡಾದ ಬಗ್ಗೆ ಕೇಳಿ ಬಂದ ಮತ್ತೊಂದು ಟೀಕೆಯೆಂದರೆ, ಒಂದೇ ಬಾರಿಗೆ ಎಲ್ಲಾ ರಾಜ್ಯಗಳಲ್ಲೂ ಅದು ಜಾರಿಗೆ ಬಂತು. ಭಯೋತ್ಪಾದಕ ಎನ್ನಬಹುದಾದ ಯಾವುದೇ ಚಳವಳಿಗಳಿರದ ರಾಜ್ಯಗಳಲ್ಲೂ ಜನರು ಅಪಾರ ಸಂಖ್ಯೆಯಲ್ಲಿ ಬಂಧನಕ್ಕೊಳಗಾದರು. ಈ ಪರಿಸ್ಥಿತಿ ಪೋಟಾದಿಂದಾಗಿ ಇನ್ನಷ್ಟು ಕೆಡುತ್ತದೆ. ಪ್ರಕಟಣೆಗೆ ಅಗತ್ಯವಾದ ಉಪನಿಯಮವನ್ನೇ ತೆಗೆದು ಹಾಕುವುದರಿಂದಾಗಿ ಇದು ಮತ್ತಷ್ಟು ತೊಂದರೆಯನ್ನುಂಟು ಮಾಡುತ್ತದೆ. ದೇಶದ ಪ್ರತಿಯೊಬ್ಬ ಪ್ರಜೆಯೂ–ಚುನಾಯಿತ ಪ್ರತಿನಿಧಿಯೂ ಸೇರಿದಂತೆ–ಈ ಕಾನೂನಿನ ಪರಿಧಿಗೆ ಬರುತ್ತಾನೆ/ಳೆ. ಇದರ ಅರ್ಭಟದ ಹೊಡೆತ ದಿಂದ ಯಾರೂ ತಮ್ಮನ್ನು ತಾವು ರಕ್ಷಿಸಿಕೊಳ್ಳಲಾರರು.

ಕಾನೂನನ್ನು ಜನ ವಿರೋಧಿಯನ್ನಾಗಿಸುವುದೆಂದರೆ ಇಷ್ಟೇ ಸಾಲದು; ಅದು "ಹೊಸ" ಅಪರಾಧಗಳ ಪರಿಭಾಷೆಯನ್ನು ನೀಡುವಷ್ಟಕ್ಕೆ ವಿಸ್ತರಿಸುತ್ತದೆ. ಅದರಲ್ಲಿ ಪಟ್ಟಿಯಾದ "ಹೊಸ ಅಪರಾಧಗಳು" ಈ ಮೊದಲಿನ ಕಾನೂನುಗಳಲ್ಲೇ ಸೇರಿ ಕೊಂಡಿವೆ. ಇದರ ಹೊಸತನವೆಂದರೆ, ಜನರು ಮಾಡುವ ಕ್ರಿಯೆಗಳು ಅಪರಾಧಗಳು ಎನ್ನುವುದಕ್ಕಿಂತ, ಆ ಕ್ರಿಯೆಗಳ ಹಿಂದಿನ

ಉದ್ದೇಶವನ್ನು ಕಾನೂನನ್ನು ಜಾರಿಗೊಳಿಸುವವರು ವ್ಯಾಖ್ಯಾನಿಸುವುದನ್ನು ಆಧರಿಸಿದೆ. ಯಾವುದೇ ಕ್ರಿಯೆಯು

1 ಭಾರತದ ಏಕತೆ, ಸಮಗ್ರತೆ, ಸುರಕ್ಷತೆ ಮತ್ತು ಸಾರ್ವಭೌಮತ್ವಕ್ಕೆ ಬೆದರಿಕೆಯೊಡ್ಡುವ ಅಥವಾ ಜನರಲ್ಲಿ/ ಯಾವುದೇ ಒಂದು ವರ್ಗದ ಜನರಲ್ಲಿ ಭಯೋತ್ಪಾದನೆಯನ್ನು ಮಾಡುವ ಉದ್ದೇಶ ಹೊಂದಿದ್ದಲ್ಲಿ

2 ಸಿಡಿಮದ್ದು, ಸುಲಭವಾಗಿ ದಹಿಸುವ ವಸ್ತುಗಳು, ಫಿರಂಗಿ/ಬಂದೂಕ್ಕುಗಳು, ಅಪಾಯಕಾರಿ ಆಯುಧಗಳು ರಾಸಾಯನಿಕಗಳು ಅಥವಾ ಯಾವುದೇ ಆಯುಧಗಳನ್ನು ಬಳಸಿದಾಗ

3 ವ್ಯಕ್ತಿಯೊಬ್ಬನಿಗೆ ಮರಣ/ಗಾಯ ಅಥವಾ ಆಸ್ತಿ ಪಾಸ್ತಿ ಹಾನಿ. ಅಥವಾ ಅಗತ್ಯ ವಸ್ತುಗಳ ಸರಬರಾಜು ಸೇವೆಯಲ್ಲಿ ಏರುಪೇರು ಅಥವಾ ಕೇಂದ್ರ / ರಾಜ್ಯ ಸರಕಾರಗಳ ಮಧ್ಯವರ್ತೀ ಸಂಸ್ಥೆಗಳ ಆಸ್ತಿಗೆ ಹಾನಿಯುಂಟಾದಲ್ಲಿ [(S.3(1) (a)]

ಅಥವಾ

ಕಾನೂನು ಬಾಹಿರ ಚಟುವಟಿಕೆಗಳ ಪ್ರತಿಬಂಧಕ ಕಾಯಿದೆಯಲ್ಲಿ ನಿಷೇಧಿಸಿರುವಂತೆ, ಯಾವುದಾದರು ಸಂಸ್ಥೆಯ ಸದಸ್ಯರಾಗಿದ್ದರೆ, ಧನಸಹಾಯ ಅಥವಾ ಪ್ರೋತ್ಸಾಹ ನೀಡುತ್ತಿದ್ದರೆ, ಬಂದೂಕುಗಳನ್ನು ಹೊಂದಿದ್ದರೆ, ಜೀವಹಾನಿ/ ತೀವ್ರಗಾಯ ಅಥವಾ ಆಸ್ತಿಪಾಸ್ತಿಗೆ ಹೆಚ್ಚಿನ ಹಾನಿಯುಂಟುಮಾಡುವ ಯಾವುದೇ ಆಯುಧವನ್ನು ಹೊಂದಿದ್ದರೆ,

ಅವು ಭಯೋತ್ಪಾದಕ ಚಟುವಟಿಕೆಯ ಪರಿಭಾಷೆಯ ವ್ಯಾಪ್ತಿಗೆ ಬರುತ್ತವೆ [(S.3 (1) (b)].

ಭಯೋತ್ಪಾದಕ ಕ್ರಿಯೆಯ ಇಂಥ ಪರಿಭಾಷೆ ಹಿಂಸೆಯ ದಾರುಣ ಚಿತ್ರಗಳನ್ನು ಹೊರತಾಗಿಸಿದೆ. ಮೊದಲನೆಯದಾಗಿ, ದೇಶದ ಏಕತೆ-ಸಮಗ್ರತೆಗಳಿಗೆ ಬೆದರಿಕೆ ಉಂಟಾಗಿದೆ ಅಥವಾ ಜನತೆ ಭಯೋತ್ಪಾದನೆಗೊಳಾಗಾಗಿದೆಯೆಂದು ಸರಕಾರ ಭಾವಿಸಿದಾಗ ಮಾತ್ರ ಭಯೋತ್ಪಾದನೆ ಇದೆಯೆಂದಾಗುತ್ತದೆ. ಎರಡನೆಯದಾಗಿ, ದೇಹ ಮತ್ತು ಆಸ್ತಿಗೆ ಸಂಬಂಧಪಟ್ಟ ಅಪರಾಧಗಳೆಲ್ಲವನ್ನೂ ಸಾಮಾನ್ಯ ಕಾಯಿದೆಗಳಲ್ಲಿ ಸೇರಿಸಲಾಗಿದೆ. "ಭಯೋತ್ಪಾದನೆ" ಯಾವುದು ಎನ್ನುವುದನ್ನು ಪ್ರಭುತ್ವದ ಆವಶ್ಯಕತೆಗಳು ನಿರ್ಧರಿಸುತ್ತವೆ. ಯಾವುದೇ ರಕ್ಷಾವರಣವನ್ನು ಉಲ್ಲಂಘಿಸಿ ಪ್ರವೇಶಿಸುವ ಪ್ರತಿಭಟನಾ ಮೆರವಣಿಗೆ, ಜನರ ಓಡಾಟಕ್ಕೆ ಅಡ್ಡಿಯುಂಟುಮಾಡುವ ಧಾರ್ಮಿಕ ಚಳವಳಿಗಳನ್ನು ಪೋಟಾ ವ್ಯಾಪ್ತಿಗೆ ತರಬಹುದು. ಹಾಗೆಯೇ ಮತೀಯ ಗಲಭೆಗಳಲ್ಲಿ ಸಂಭವಿಸುವ ಕೊಲೆಗಳಾಗಲೀ, ದಲಿತರ ಕೇರಿಗಳಲ್ಲಿ ಹೊತ್ತಿಸುವ ಉರಿಯಾಗಲೀ ಭಯೋತ್ಪಾದನೆ ಆಗದಿರಬಹುದು. ಇಂಥ ನಿರ್ಣಯಗಳೆಲ್ಲ ಪೊಲೀಸು ಅಧಿಕಾರಿಯ, ಜಿಲ್ಲಾ ಆಡಳಿತದ, ರಾಜ್ಯ ಸರಕಾರ ಅಥವಾ ಇವುಗಳ ಮೇಲೆ ಪ್ರಭಾವ/ ಒತ್ತಡ ತರುವಷ್ಟು ಪ್ರಭಲರಾದವರೊಬ್ಬರ ಹುಚ್ಚನ್ನು ಅವಲಂಬಿಸಿರುತ್ತವೆ. ಸಂಘ ಸಂಸ್ಥೆಗಳ ನಿಷೇಧ ಸರಕಾರದ ರಾಜಕೀಯ ನಿರ್ಧಾರವಾಗುತ್ತದೆ. ಈ ಪೂರ್ವಬಾವಿ ಹೇಳಿಕೆಯನ್ನು ಆಧರಿಸಿ ಭಯೋತ್ಪಾದಕ ಕೆಲಸಗಳನ್ನು ವ್ಯಾಖ್ಯಾನಿಸುವುದು ಕೂಡ ಆ ವ್ಯಾಖ್ಯಾನವನ್ನು ಪಕ್ಷಪಾತವಾದದ್ದನ್ನಾಗಿಸುತ್ತದೆ.

ಈ ಶಾಸನದನ್ವಯ ಶಿಕ್ಷೆಯು ಕನಿಷ್ಠ ಐದು ವರ್ಷಗಳಿಂದ ಜೀವಾವಧಿಯವರೆಗೆ ವಿಸ್ತರಿಸಬಹುದು [(S.3 (2)].

ಸಾಮಾನ್ಯ ಕಾಯಿದೆಯಡಿ ಅಂಥ ಅಪರಾಧಗಳಿಗೆ ಕೊಡುವ ಶಿಕ್ಷೆ ಅಲ್ಪಾವಧಿಯದಾಗಿರುತ್ತದೆ. ಒಟ್ಟಿನಲ್ಲಿ ಒಂದೇ ರೀತಿಯ ಅಪರಾಧಗಳನ್ನು ಭಿನ್ನವಾದ ದೃಷ್ಟಿಯಲ್ಲಿ ನೋಡುವ ಅವಕಾಶವನ್ನು ಪೋಟಾ ನೀಡುತ್ತದೆ. ಇದು ಕಾನೂನಿನಲ್ಲಿ ಸಮಾನತೆಯ ಹಕ್ಕಿನ ಉಲ್ಲಂಘನೆಯಾಗಿದೆ.

ಪೋಟಾ ಶಾಸನದಡಿ ಜನರನ್ನು ತರಲು ಇರುವ ವೈವಿಧ್ಯಮಯ ಅವಕಾಶಗಳನ್ನು ಒಟ್ಟಾರೆ ಗಮನಿಸಿದರೆ, ಅದರಿಂದ ಉಂಟಾಗಬಹುದಾದ ಅಗಾಧ ಪ್ರಮಾಣದ ಹಾನಿಯು ಅರಿವಾಗುತ್ತದೆ. ಆರೋಪ ಹೊರಿಸಲು ಜನರು ಭಯೋತ್ಪಾದಕ ಕ್ರಿಯೆಗಳಲ್ಲಿ ತೊಡಗಲೇಬೇಕೆಂದೇನೂ ಇಲ್ಲ. ಪಿತೂರಿ ಮಾಡುವುದು ಅಥವಾ ಅದಕ್ಕಾಗಿ ಪ್ರಯತ್ನಿಸುವುದು, ಪ್ರಚಾರ ಮಾಡುವುದು, ಪ್ರೇರೇಪಿಸುವುದು, ಬುದ್ಧಿವಾದ ಹೇಳುವುದು ಅಥವಾ ಉದ್ದೀಪಿಸುವುದು ಅಥವಾ ಅಂಥ ಚಟುವಟಿಕೆಗಳಿಗೆ ಸಿದ್ಧತೆ ನಡೆಸುವುದು ಕೂಡ ಶಿಕ್ಷಾರ್ಹ. "ಪ್ರಚಾರ" "ಪ್ರೇರೇಪಿಸು" "ಬುದ್ಧಿ ಹೇಳು" ಮುಂತಾದ ಪದಗಳು ಅಸ್ಪಷ್ಟವಾಗಿವೆ. ಇದರಿಂದಾಗಿ ಭಯೋತ್ಪಾದಕ ಕ್ರಿಯೆಯ ಆರೋಪಿಯೊಂದಿಗೆ ಸಂಬಂಧವಿಲ್ಲದವರನ್ನು ಸೇರಿಸಿಕೊಂಡು 5 ವರ್ಷಗಳಿಂದ ಜೀವಾವಧಿಯ ಶಿಕ್ಷೆಯನ್ನು ಕೊಡಿಸಬಹುದಾಗಿದೆ. [(S.3 (3)] ಭಯೋತ್ಪಾದಕರಿಗೆ ಆಶ್ರಯ ನೀಡಿದ ಆರೋಪ ಹೊರಿಸಿ ಕುಟುಂಬಗಳನ್ನು, ಸ್ನೇಹಿತರನ್ನು ಮೂರು ವರ್ಷಗಳಿಂದ ಜೀವಾವಧಿಯವರೆಗೆ ಶಿಕ್ಷೆಗೆ ಗುರಿಪಡಿಸಬಹುದು. ಭಯೋತ್ಪಾದಕ ಚಟುವಟಿಕೆಗಳಿಂದ ಬಂದ ನಿಧಿ ಮತ್ತು ಆಸ್ತಿಯನ್ನು ಪಡೆಯುವ ಅಥವಾ ತಮ್ಮ ವಶದಲ್ಲಿಟ್ಟುಕೊಳ್ಳುವ ಸಾಮಾನ್ಯ ಜನರನ್ನು ಭಯೋತ್ಪಾದಕ ಸಂಸ್ಥೆಗಳನ್ನು ಬೆಂಬಲಿಸುತ್ತಾರೆಂಬ ಆರೋಪದ ಮೇಲೆ ಪೋಟೊ ವ್ಯಾಪ್ತಿಗೊಳಪಡಿಸಿ ಬಂಧಿಸಬಹುದು. ಭೂ

ಪುನರ್ ಹಂಚಿಕೆ ಕಾರ್ಯಕ್ರಮದ ಅಂಗವಾಗಿ ರೈತ ಸಂಘಟನೆಯೊಂದು ಭೂ ರಹಿತ ದಲಿತನೊಬ್ಬನಿಗೆ ತುಂಡು ಜಮೀನನ್ನು ನೀಡಿದರೆ ಅಥವಾ ಉಗ್ರಾಣವೊಂದನ್ನು ಲೂಟಿ ಮಾಡಿದ ಸಂಸ್ಥೆಯೊಂದು ಬರಪೀಡತ ಜನರಿಗೆ ಧಾನ್ಯ ಹಂಚಿದ್ದರೆ ಅವರೆಲ್ಲರೂ ಶಿಕ್ಷಾರ್ಹರಾಗುತ್ತಾರೆ. ಭಯೋತ್ಪಾದಕ ಸಂಘಟನೆಯೊಂದರ ಸದಸ್ಯತ್ವವನ್ನು ಪಡೆಯುವುದು ಜೀವಾವಧಿ ಶಿಕ್ಷೆಗೆ ಅರ್ಹವೆನಿಸುತ್ತದೆ [(S.3 (5)]. ಇದು ಅಪರಾಧ ದಂಡ ಸಂಹಿತೆಯ ಎಲ್ಲಾ ಪ್ರಮಾಣಿಕ ಮಾದರಿಗಳಿಗೆ ವಿರುದ್ಧವಾಗಿದೆ.

ಇನ್ನೊಂದು ಆಕ್ಷೇಪಾರ್ಹವಾದುದೇನೆಂದರೆ, ಭಯೋತ್ಪಾದಕ ಚಟುವಟಿಕೆಯ ಆರೋಪಕ್ಕೊಳಗಾದ ವ್ಯಕ್ತಿಯೊಬ್ಬರನ್ನು ಬಂಧಿಸಲು ನೆರವಾಗುಬಹುದಾದ ಮಾಹಿತಿಯನ್ನು ತಡೆಹಿಡಿದಿರುವ ಗುಮಾನಿಯಿಂದಲೇ ವ್ಯಕ್ತಿಯೊಬ್ಬರನ್ನು ಗುರಿಯಾಗಿಟ್ಟುಕೊಳ್ಳಬಹುದು. [(S.3(8)] ಪತ್ರಕರ್ತರು, ಚಲನಚಿತ್ರ ನಿರ್ಮಾಪಕರು, ಸಂಶೋಧಕರು, ಮಾನವ ಹಕ್ಕುಗಳ ಸತ್ಯಶೋಧನಾ ತಂಡಗಳಲ್ಲದೆ ಆರೋಗ್ಯ, ಅಭಿವೃದ್ಧಿ, ಶಿಕ್ಷಣ, ಪ್ರಕೃತಿ ವಿಕೋಪ, ಪರಿಹಾರ ಮುಂತಾದ ಜೀವನಾವಶ್ಯಕತೆಗಳನ್ನೊದಗಿಸುವ ಸೇವೆಯಲ್ಲಿ ತೊಡಗಿರುವ, ಸ್ಥಳೀಯ ಜನರೊಂದಿಗೆ ಬೆರೆಯಬೇಕಾಗಿರುವ ಸಂಸ್ಥೆಗಳು ಪೊಲೀಸು ಮಾಹಿತಿದಾರರಾಗುವಂತೆ ಇದು ಒತ್ತಾಯಿಸುತ್ತದೆ.

ಭಯೋತ್ಪಾದಕರಿಗೆ ನೆರವಾಗುವ ಉದ್ದೇಶದಿಂದ ಶಸ್ತ್ರಾಸ್ತ್ರ ಕಾಯಿದೆ (Arms Act), ಸ್ಫೋಟಕ ವಸ್ತುಗಳ ಕಾಯಿದೆ, (Explosive Substancees Act)ಅಥವಾ ದಹ್ಯ ವಸ್ತುಗಳ ಕಾಯಿದೆ (Inftlammable Substances Act)ಗಳಲ್ಲಿರುವ ಷರತ್ತುಗಳ ಉಲ್ಲಂಘನೆ ಅಥವಾ ಉಲ್ಲಂಘನೆಯ ಪ್ರಯತ್ನ ಅಥವಾ ಅದನ್ನು ಪ್ರೇರೇಪಿಸುವುದು ಈ ಶಾಸನದನ್ವಯ ಜೀವಾವಧಿ ಶಿಕ್ಷೆಗೆ ಅರ್ಹವಾಗುತ್ತದೆ (S. 5).

ವಿಶೇಷವಾಗಿ ಘೋಷಿತ ಪ್ರದೇಶಗಳಲ್ಲಿ ಕೇವಲ ಶಸ್ತ್ರಾಸ್ತ್ರಗಳನ್ನು ಹೊಂದಿರುವುದೂ ಕೂಡ ಜೀವಾವಧಿ ಶಿಕ್ಷೆಗೆ ಅರ್ಹವಾದ ಅಪರಾಧವಾಗುತ್ತದೆ.

ಸರಕಾರವು ಅಧಿಕೃತ ಗೆಜೆಟ್ಟಿನಲ್ಲಿ ಪ್ರಕಟಿಸುವ ಮೂಲಕ ಸಂಸ್ಥೆಯೊಂದನ್ನು ಭಯೋತ್ಪಾದಕ ಎಂದು ಘೋಷಿಸುವ ಅಧಿಕಾರವನ್ನು ಪೊಟೊ ನೀಡುತ್ತದೆ. ನಿಷೇಧಿಸುವುದರಲ್ಲೇ ಇರುವ ಗೊಂದಲವನ್ನು (ಅದರಿಂದ ತೊಂದರೆಗೀಡಾದವರಿಗೆ) ಕಾನೂನು ಬದ್ಧವಾದ ಪರಿಹಾರವನ್ನು ಅಲ್ಲಗಳೆಯುವ ಮೂಲಕ ಮತ್ತಷ್ಟು ಹೆಚ್ಚಿಸುತ್ತದೆ (S.18, 19). ಇದರಿಂದಾಗಿ ಈ ಶಾಸನದನ್ವಯ ಅಪರಾಧಿಗಳ ಸಂಖ್ಯೆ ಇನ್ನೂ ಹೆಚ್ಚುತ್ತದೆ. ಭಯೋತ್ಪಾದಕ ಸಂಸ್ಥೆಗಳಿಗೆ ಬೆಂಬಲ ನೀಡುವುದು/ಕೋರುವುದು, ಅವುಗಳ ಚಟುವಟಿಕೆಗಳಿಗೆ ನೆರವಾಗುವುದು, ಅಂಥ ಸಂಸ್ಥೆಗಳಿಗೆ ಸೇರಿದ ವ್ಯಕ್ತಿಯೊಬ್ಬರ ಭಾಷಣಕ್ಕೆ ಸಭೆಗಳನ್ನೇರ್ಪಡಿಸುವುದು ಮುಂತಾದವು ಅಪರಾಧದ ಪರಿಭಾಷೆಗೊಳಪಡುತ್ತವೆ. ಅಂಥ ಸಭೆಗಳಲ್ಲಿನ ಭಾಷಣಕಾರರು ಅಪರಾಧಗಳನ್ನು ಮಾಡಿರುತ್ತಾರೆಂದೇ ಭಾವಿಸಲಾಗುತ್ತದೆ. ಎಲ್ಲಕ್ಕಿಂತ ಹೆಚ್ಚಾಗಿ ಸಾರ್ವಜನಿಕರನ್ನು ಆಹ್ವಾನಿಸಲಿ ಅಥವಾ ಬಿಡಲಿ, ಮೂವರು ಅಥವಾ ಅದಕ್ಕಿಂತ ಹೆಚ್ಚಿನ ಸಂಖ್ಯೆಯಲ್ಲಿ ಜನ ಸೇರಿದಲ್ಲಿ ಅದನ್ನು ಸಭೆ ಎನ್ನಲಾಗುತ್ತದೆ(S.21)! ಹೀಗೆ ಶೈಕ್ಷಣಿಕ ಸಂಶೋಧನೆ, ಅಭಿಪ್ರಾಯ ಮತ್ತು ವಿಚಾರ ವಿನಿಮಯಗಳೆಲ್ಲವೂ ಅಪರಾಧಗಳೆಂದೇ ಪರಿಗಣಿತವಾಗಿ 10 ವರ್ಷಗಳ ಜೈಲುವಾಸದ ಶಿಕ್ಷೆಯನ್ನು ವಿಧಿಸಬಹುದಾಗಿದೆ.

ಪೊಲೀಸರು ಮತ್ತು ಅಧಿಕಾರ ವರ್ಗದವರಿಗೆ ಹೆಚ್ಚು ಅಧಿಕಾರವನ್ನು ಪೊಟೊ ಕೊಡುತ್ತದೆ. ಅಪರಾದ ದಂಡ ಸಂಹಿತೆಯಲ್ಲಿ ಈಗಿನ ಕಾಯಿದೆಗಳು ತಮ್ಮನ್ನು ಜಾರಿಗೊಳಿಸುವ ಮಾಧ್ಯವರ್ತಿಯ ನಡವಳಿಕೆಯನ್ನು ನಿಯಂತ್ರಿಸುತ್ತವೆ. ಆದರೆ ಹೊಸದೊಂದು ನಿಯಮಾವಳಿಯನ್ನೇ ರೂಪಿಸುವ ಅಧಿಕಾರವನ್ನು ಪೊಟೊ ತನ್ನ ಕಾರ್ಯಕಾರಿಗೆ ನೀಡುತ್ತದೆ. ಈ ನಿಯಮಾವಳಿಗಳು ಯಾವುದೇ ಪ್ರದೇಶಕ್ಕಾಗಲಿ ಪ್ರವೇಶಿಸಲು, ಜಾಲಾಡಲು, ವ್ಯಕ್ತಿಗಳನ್ನು ಬಂಧಿಸಲು ಅಥವಾ ಬಿಟ್ಟು ಬಿಡಲು, ಈ ನಿಯಮಾವಳಿಗಳ ಉಲ್ಲಂಘನೆಯಾಗಿದೆಯೇ ಅಥವಾ ಇಲ್ಲವೇ ಎಂದು ನಿರ್ಧರಿಸಲು ಮತ್ತು ಶಿಕ್ಷೆಗಳನ್ನು ವಿಧಿಸಲು ಕಾರ್ಯಕಾರಿಗೆ ಅಧಿಕಾರವನ್ನು ನೀಡುತ್ತದೆ. (S.61). ಕಾರ್ಯಕಾರಿಗೆ ಸಿವಿಲ್ ನ್ಯಾಯಾಲಯದ ಅಧಿಕಾರಗಳೂ ಇವೆ (S.13). ಅವು ಟಾಡಾಗಿಂತಲೂ ಒಂದು ಹೆಜ್ಜೆ ಮುಂದೆ ಹೋಗುತ್ತವೆ. ಈ ನಿಯಮಗಳು ಮತ್ತು ಆದೇಶಗಳನ್ನು ಶಾಸನಸಭೆಯ ಮುಂದೆ ತರಬೇಕಾಗಿಲ್ಲ. ಅವುಗಳ ರಚನೆಯ ಸಂದರ್ಭದಲ್ಲೂ ಯಾವುದೇ ಜವಾಬ್ದಾರಿಯನ್ನು ಹೊಂದಿರಬೇಕಾಗಿಲ್ಲ! ಈಗಿರುವ ಕಾನೂನುಗಳ ಉಲ್ಲಂಘನೆಗೆ ಅಗತ್ಯವಾದ ನಿಯಮಗಳನ್ನು ರೂಪಿಸುವ ಅಧಿಕಾರವನ್ನು ಕಾರ್ಯಕಾರಿಗೆ ನೀಡುತ್ತದೆ. ಇಲ್ಲಿನ ವಿರೋಧಾಭಾಸವೆಂದರೆ, ಕಾನೂನಿನ ಉಲ್ಲಂಘನೆಯೇ ಕಾನೂನು ಬದ್ಧವಾಗುತ್ತದೆ!

ಹೀಗೆ ಆರೋಪಿಗೆ ಯಾವುದೇ ರಕ್ಷಣೆಯನ್ನು ನೀಡದ ವಿಧಿ ವಿಧಾನಗಳ ಮೂಲಕ ಒಂದೇ ರೀತಿಯ ಅಪರಾಧಕ್ಕೆ ಕಠಿಣ ಶಿಕ್ಷೆ ಮತ್ತು ಮರಣದಂಡನೆಗಳನ್ನು ವಿಧಿಸುವ ಆಡಳಿತಾವಧಿಯನ್ನು ಪೊಟೊ ಮತ್ತೊಮ್ಮೆ ಉದ್ಘಾಟಿಸುತ್ತದೆ ಇದು ಹಲವು ದೃಷ್ಟಿಯಲ್ಲಿ ಒಂದು ಸಂಪೂರ್ಣ ಅಪಾಯಕಾರಿಯಾದ ಸಮಾನಾಂತರ

ನ್ಯಾಯಾಂಗೀಯ ವಿಧಿ ವಿಧಾನವೇ ಆಗಿದೆ; ಜನರ ಹಕ್ಕುಗಳನ್ನು ಸಂಪೂರ್ಣವಾಗಿ ಕಡೆಗಣಿಸುವಂತೆ ಮಾಡುತ್ತದೆ.

## ಪೋಟಾ ವಿಧಿ ವಿಧಾನಗಳು

### ಅ. ತನಿಖೆ

### ಆಸ್ತಿ ಸ್ವಾಧೀನ ಪಡಿಸಿಕೊಳ್ಳುವುದು

ಈ ಶಾಸನದನ್ವಯ ಆರೋಪಿಗಳದಷ್ಟೇ ಅಲ್ಲ, ಇತರರ ಆಸ್ತಿಯನ್ನೂ ಶಿಕ್ಷೆಯ ಅಂಗವಾಗಿ ಒಪ್ಪಿಸುವ ಮತ್ತು ಮುಟ್ಟುಗೋಲು ಹಾಕಿಕೊಳ್ಳುವ ಅವಕಾಶವಿದೆ [(6(2)]. ಸಾಮಾನ್ಯ ಕಾನೂನಿನನ್ವಯ, ಆಸ್ತಿ ಮುಟ್ಟುಗೋಲು ಎನ್ನುವುದು ಒಂದು ಶಿಕ್ಷೆ ಎಂದು ಪರಿಗಣಿಸಲಾಗುತ್ತದೆ; ಕೋರ್ಟಿನಿಂದ ಶಿಕ್ಷೆಗೊಳಗಾದ ವ್ಯಕ್ತಿಯ ಮೇಲೆ ವಿಧಿಸಬಹುದಾಗಿದೆ. ಆದರೆ ಪೋಟಾದನ್ವಯ, ಭಯೋತ್ಪಾದನಾ ಚಟುವಟಿಕೆಯಿಂದ ಸಂಗ್ರಹವಾದ ಹಣ/ಆಸ್ತಿಗಳೆಲ್ಲವನ್ನೂ ಆರೋಪಿಯು ಶಿಕ್ಷೆಗೊಳಗಾಗಲಿ, ಬಿಡಲಿ ಒಪ್ಪಿಸಬಿಡಬೇಕಾಗುತ್ತದೆ. (S6&8) ಇದರಿಂದಾಗಿ ಪೊಲೀಸರಿಗೆ ಹಣ ಕೀಳಲು ಅತ್ಯಂತ ಹೆಚ್ಚಿನ ಅವಕಾಶಗಳನ್ನು ಕಲ್ಪಿಸಿದಂತಾಗುತ್ತದೆ.

ಸಾಮಾನ್ಯ ಕಾನೂನಿನನ್ವಯ, ವ್ಯಕ್ತಿಯೊಬ್ಬರು ವಿಚಾರಣೆಗೆ ಬರದೆ ಕಣ್ಮರೆಯಾದರೆ ಅವನ/ಳ ಆಸ್ತಿಯನ್ನು ಮುಟ್ಟುಗೋಲು ಹಾಕಿಕೊಳ್ಳಲು ಅವಕಾಶವಿದೆ. ಆದರೆ ಪೋಟಾದನ್ವಯ ಆರೋಪಿಯೊಬ್ಬರು ವಿಚಾರಣೆಯನ್ನೆದುರಿಸುತ್ತಿರುವಾಗಲೇ ಅವರ ಚರ ಮತ್ತು ಸ್ಥಿರ ಆಸ್ತಿಗಳೆಲ್ಲವನ್ನು ವಶಪಡಿಸಿಕೊಳ್ಳಬಹುದು; ಶಿಕ್ಷೆಯಾದ ನಂತರ ಅವುಗಳನ್ನು ಮುಟ್ಟುಗೋಲು ಹಾಕಿಕೊಳ್ಳಬಹುದು. ಅವುಗಳಿಗೂ ಭಯೋತ್ಪಾದನೆಯ ಹಣಕ್ಕೂ ಯಾವುದೇ ಸಂಬಂಧವಿರಬೇಕೆಂದಿಲ್ಲ. ಹಲವಾರು ವರ್ಷಗಳಿಂದ ಕುಟುಂಬವೊಂದು ವಾಸಮಾಡುತ್ತಾ ಬಂದಿರುವ ಮನೆಯನ್ನು ಕೂಡ ಸ್ವಾಧೀನಪಡಿಸಿಕೊಂಡು ಮುಟ್ಟುಗೋಲು ಹಾಕಿಕೊಳ್ಳಬಹುದು.

### ತಪ್ಪೊಪ್ಪಿಗೆಗಳು

ಸಾಮಾನ್ಯ ವಿಧಿ ವಿಧಾನದಲ್ಲಿ ನ್ಯಾಯಾಲಯ ಅಥವಾ ನ್ಯಾಯಾಧೀಶರೆದುರು ಮಾಡಿಕೊಂಡ 'ತಪ್ಪೊಪ್ಪಿಗೆಗಳು' ಮಾತ್ರ ಮಾನ್ಯವಾಗುತ್ತಿದ್ದವು. ಆದರೆ ಈ ಶಾಸನದನ್ವಯ ಪೊಲೀಸು ಅಧಿಕಾರಿಗಳ ಮುಂದೆ ಮಾಡಿದ ತಪ್ಪೊಪ್ಪಿಗೆಗಳನ್ನು ಪುರಾವೆ ಎಂದು ಮಾನ್ಯ ಮಾಡಬಹುದಾಗಿದೆ. [(S.32(1)]. ಇದು ಬಂಧನದ ದುರ್ಬಳಕೆ ಮತ್ತು ಹಿಂಸೆಯ ಪರಿಣಾಮವಾದ ತಪ್ಪೊಪ್ಪಿಗೆಗಳನ್ನು ಆಹ್ವಾನಿಸಿದಂತೆ. ಉನ್ನತ ಪೊಲೀಸು ಅಧಿಕಾರಿಯ ಮುಂದೆ ಮಾಡಿದ ತಪ್ಪೊಪ್ಪಿಗೆಗೆ ಮಾನ್ಯತೆ ನೀಡುವುದನ್ನು ಒಂದು 'ರಕ್ಷಣಾವಕಾಶ' ಎನ್ನಲಾಗಿದೆ. ಆದರೆ ಈ ಹಿಂದಿನ ಅನುಭವಗಳು ಹೇಳುವುದೇ ಬೇರೆ, ಅದು ಮೂರನೆಯ ದರ್ಜೆಯ ವಿಧಾನಗಳ ಬಳಕೆಯ ವಿರುದ್ಧ ಯಾವುದೇ ರಕ್ಷಣೆಯನ್ನು ನೀಡಲಾರದು ಎಂದು!

### ತಂತಿ, ಇಲೆಕ್ಟ್ರಾನಿಕ್ ಅಥವಾ ಮೌಖಿಕ ಸಂಪರ್ಕಕ್ಕೆ ತಡೆ

ಈ ಶಾಸನದಡಿ ತಂತಿ, ಇಲೆಕ್ಟ್ರಾನಿಕ್ ಅಥವಾ ಮೌಖಿಕ ಸಂಪರ್ಕವನ್ನು ತಡೆ ಹಿಡಿಯುವ ಅವಕಾಶ ಪೊಲೀಸರಿಗಿದೆ. ಅದನ್ನೇ ಆರೋಪಿಯ ವಿರುದ್ಧದ ಸಾಕ್ಷಿಯಾನ್ನಾಗಿ ಬಳಸಿಕೊಳ್ಳಬಹುದು ಕ್ರಮಕ್ಕೆ ಜಂಟಿ ಕಾರ್ಯದರ್ಶಿ ಮಟ್ಟದ ಅಧಿಕಾರಿಯ ಅನುಮತಿ ಬೇಕು (S.37). ಸಂಪರ್ಕ ತಡೆಹಿಡಿಯು ವುದನ್ನೇ ಅಪರಾಧಕ್ಕೆ ಸಾಕ್ಷ್ಯಾಧಾರವನ್ನಾಗಿ ಪೊಲೀಸರು ಒದಗಿಸುವುದರ ವಿಶ್ವಾಸಾರ್ಹತೆಯನ್ನು ಪರಿಶೀಲಿಸುವ ಯಾವುದೇ ವಿಧಾನ ಇಲ್ಲ, ಟೆಲಿಫೋನ್, ಇ-ಮೇಲ್ ಮತ್ತು ಖಾಸಗಿ ಸಂಭಾಷಣೆಗಳ ಕದ್ದಾಲಿಕೆಯನ್ನು ಈ ಶಾಸನ ಕಾನೂನು ಬದ್ಧಗೊಳಿಸುತ್ತದೆ. ಇದು ನ್ಯಾಯಾಲಯಗಳು ಎತ್ತಿಹಿಡಿದ ಗೋಪತ್ಯೆಯ ಹಕ್ಕಿನ ಸ್ಪಷ್ಟ ಉಲ್ಲಂಘನೆಯಾಗಿದೆ.

### ಮರುಬಂಧನ ಮತ್ತು ಜಾಮೀನು

ಬಂಧಿತ ಆರೋಪಿಯೊಬ್ಬರನ್ನು ಪೋಲಿಸರು ತಮ್ಮ ವಶದಲ್ಲಿ 30 ದಿನಗಳವರೆಗೆ, ಆರೋಪ ಪಟ್ಟಿಯನ್ನು ಸಲ್ಲಿಸದೆ 6 ತಿಂಗಳವರೆಗೆ ನ್ಯಾಯಾಂಗ ಬಂಧನದಲ್ಲಿಟ್ಟುಕೊಳ್ಳುವ ಅವಕಾಶವಿದೆ [(S. 48(2)] ಜಾಮೀನಿನ ಹಕ್ಕುನ್ನು ಬಹಳಷ್ಟು ನಿರ್ಬಂಧಿಸಲಾಗಿದೆ. [(S,48(7)] ಆರೋಪಿಯು ತಪ್ಪಿತಸ್ಥರಲ್ಲವೆಂದು ನಂಬಲು ಬಲವಾದ ಕಾರಣಗಳಿವೆಯೆಂದು ಮನವರಿಕೆಯಾದಲ್ಲಿ ಮಾತ್ರ ನ್ಯಾಯಾಲಯ ಜಾಮೀನನ್ನು ನೀಡಬಹುದಾಗಿದೆ! ನಿರೀಕ್ಷಣಾ ಜಾಮೀನಿಗೆ ಅವಕಾಶವಿಲ್ಲ [(S. 48(5)] ಆರೋಪಿಯು ವಿದೇಶೀ ಪ್ರಜೆಯಾಗಿದ್ದರೆ ಇದು ಮತ್ತುಷ್ಟು ಅನುಲ್ಲಂಘನೀಯವಾಗುತ್ತದೆ. (S.48 (9) ಬಂಧಿತ ಆರೋಪಿಯನ್ನು ಆರೋಪ ಪಟ್ಟಿಯನ್ನು ಸಲ್ಲಿಸದೆ ಜೈಲಿನಲ್ಲಿಡಲಾಗುತ್ತದೆ. ಪ್ರತಿಬಂಧಕ ಬಂಧನ ಈ ಶಾಸನದ ಎದ್ದು ಕಾಣುವ ತರ್ಕವಾಗಿದೆ.

### ಆ. ವಿಚಾರಣೆ

### ನಿಯಮಿತ ನ್ಯಾಯಾಲಯಗಳು

ರಾಜ್ಯ ಮತ್ತು ಕೇಂದ್ರ ಸರಕಾರಗಳು ವಿಶೇಷ ನ್ಯಾಯಾಲಯಗಳನ್ನು ಸ್ಥಾಪಿಸುವ ಅವಕಾಶವನ್ನು ಪೋಟಾ ನೀಡುತ್ತದೆ. [(S.23)]. ನಿವೃತ್ತ ಸೆಷನ್ಸ್ ನ್ಯಾಯಾಧೀಶರು ಇದರ ಅಧ್ಯಕ್ಷರಾಗಿರುತ್ತಾರೆ. ಈ ನ್ಯಾಯಾಲಯಗಳು ಯಾವ ಸ್ಥಳಗಳಲ್ಲಿರ

ಬೇಕೆಂದು ಕೇಂದ್ರ ಸರಕಾರ ನಿರ್ಧರಿಸುತ್ತದೆ. ಶೀಘ್ರ ಮತ್ತು ನಿಷ್ಪಕ್ಷ ಪಾತವಾದ ವಿಚಾರಣೆ ಇವುಗಳ ಸ್ಥಾಪನೆಯ ಗುರಿಯಾಗಿರುತ್ತದೆ. ಇವು ಪೊಟಾದ ನಿಜವಾದ ಬಣ್ಣವನ್ನು ಬಯಲು ಮಾಡುತ್ತವೆ. ಇವುಗಳು ಆವರಣದಲ್ಲಿ ಪೊಲೀಸರ ಮುಂದೆ ಮಾಡಿದ ತಪ್ಪೊಪ್ಪಿಗೆಗಳನ್ನು ಆಧರಿಸಿ ಆರೋಪಿಯ ವಿಚಾರಣೆ ನಡೆಯುತ್ತದೆ; ಜಾಮೀನನ್ನು ತಿರಸ್ಕರಿಸಲಾಗುತ್ತದೆ; ಆರೋಪಿಯು ಅಪರಾಧಿಯೆಂಬ ಪೂರ್ವಗ್ರಹವಿರುವುದರಿಂದ ಯಾವುದೇ ಪರಿಣಾಮಕಾರೀ ಪಾಟಿ ಸವಾಲುಗಳಿಗೆ ಅವಕಾಶ ವಿರುವುದಿಲ್ಲ. ಈ ನ್ಯಾಯಾಲಯಗಳ ಅಗ್ರಪೀಠದಲ್ಲಿ ನಿವೃತ್ತ ನ್ಯಾಯಾಧೀಶರು ಇರುತ್ತಾರೆ. ಅಂದರೆ ನೇಮಕ ಮಾಡುವ ಪ್ರಾಧಿಕಾರ ತನ್ನ ತಾಳಕ್ಕೆ ತಕ್ಕಂತೆ ಕುಣಿಯುವವರನ್ನು ಆಯ್ಕೆ ಮಾಡಿಕೊಳ್ಳುತ್ತದೆಂದೇ ಅರ್ಥ. ಈ ನ್ಯಾಯಾಲಯಗಳು ಇರಬೇಕಾದ ಸ್ಥಳಗಳನ್ನು ಗುರುತಿಸಿ ನಿರ್ಧರಿಸುವುದನ್ನು ಕಾರ್ಯಕಾರಿ ಪ್ರಾಧಿಕಾರಗಳ ವಿವೇಚನೆಗೆ ಬಿಡಲಾಗುತ್ತದೆ. ಅವು ರಾಜೀವಗಾಂಧಿ ಪ್ರಕರಣದಲ್ಲಿದ್ದಂತೆ ಜೈಲಿನ ಆವರಣದಲ್ಲೇ ಇರಬಹುದು ಅಥವಾ ಅಸಂಖ್ಯಾತ ಟಾಡಾ ಪ್ರಕರಣಗಳಲ್ಲಿದ್ದಂತೆ ಆರೋಪಿಗಳಿರುವ ಪ್ರದೇಶದಿಂದ ಬಹುದೂರದಲ್ಲಿರಬಹುದು. ಕುಟುಂಬದವರು, ಜಾಮೀನು ಆಕಾಂಕ್ಷಿಗಳು ಮತ್ತು ಆರೋಪಿ ಪರ ವಕೀಲರಿಗೂ ತೊಂದರೆಯನ್ನುಂಟುಮಾಡಬಹುದು.

ಬಹುಶೀಘ್ರ ವಿಚಾರಣೆಗೆ ಅನುಕೂಲವಾಗುವಂತೆ ಕ್ಷಿಪ್ರ ವಿಚಾರಣೆ (Summary Trials)ಗಳಿಗೂ ಅವಕಾಶವಿದೆ. [(S.29(2)]; ತೀರ್ಪುಗಳನ್ನು ನೀಡಲು ಎರಡು ವರ್ಷಗಳ ಕಾಲಾವಕಾಶವಿದೆ. ಸಾಮಾನ್ಯ ಕಾನೂನಿನಲ್ಲಾದರೆ ಮೂರು ತಿಂಗಳಿಗಿಂತ ಹೆಚ್ಚು ಕಾಲಾವಧಿಯ ಶಿಕ್ಷೆ ನೀಡಲಾಗದಂಥ ಅಪರಾಧಗಳಿಗೆ ಸಂಬಂಧಿಸಿದಂತೆ ಕ್ಷಿಪ್ರ ವಿಚಾರಣೆಗಳು ನಡೆಯುತ್ತವೆ. ಆದರೆ ಪೊಟಾ ಶಾಸನದಡಿ ಆರೋಪಿ ಅಥವಾ ಅವರ ವಕೀಲರ ಗೈರು ಹಾಜರಿಯಲ್ಲೂ ವಿಚಾರಣೆ ನಡೆಯಲು ಸಾಧ್ಯವಿದೆ [(S.29(5)].

## ಸಾಕ್ಷಿ ರಕ್ಷಣೆ ಮತ್ತು ಕ್ಯಾಮರಾ ಕಾರ್ಯವಿಧಾನ

ಸಾಕ್ಷಿಗಳನ್ನು ದಾರಿ ತಪ್ಪಿಸುವ ಮತ್ತು ಅವರಲ್ಲಿ ಬೆದರಿಕೆಯುನ್ನುಂಟು ಮಾಡುವುದರಿಂದ ರಕ್ಷಿಸಲು ಅವರು ಯಾರೆಂದು ಪ್ರಕಟಿಸುವ ಅಗತ್ಯವಿಲ್ಲ. [(S.30(2)] ಅಂದರೆ ವಿಚಾರಣಾವಧಿಯಲ್ಲಿ ಪೊಲೀಸರು ತಮ್ಮಲ್ಲಿರುವ ಸಿದ್ಧ ಸಾಕ್ಷಿಗಳನ್ನು ಹಾಜರುಪಡಿಸಬಹುದೆಂದೇ ಇದರ ಅರ್ಥ. ಪಾಟೀಸವಾಲಿನ ಸಾಧ್ಯತೆಯನ್ನು ಇಲ್ಲಿ ತೀವ್ರವಾಗಿ ಉಪೇಕ್ಷಿಸಲಾಗಿದೆ. ಇದು ಫಿರ್ಯಾದಿಗೆ (Prosecution) ಅನಗತ್ಯ ಅನುಕೂಲಗಳನ್ನು ಮಾಡಿಕೊಡುತ್ತದೆ. ವಿಶೇಷ ನ್ಯಾಯಾಲಯಗಳ ವಿವೇಚನೆಗನುಗುಣವಾಗಿ ಕ್ಯಾಮರಾದಲ್ಲಿ ವಿಚಾರಣೆಗಳು ದಾಖಲಾಗುತ್ತವೆ. (S.30(1). ವಿಚಾರಣೆಗಳು ಮುಕ್ತ ವಾಗಿಲ್ಲದಾಗ ಸಾಕ್ಷಿಗಳನ್ನು ಫಿರ್ಯಾದಿಗಳು ತಿರುಚುವ ಸಾಧ್ಯತೆಗಳು ಹೆಚ್ಚಾಗುತ್ತವೆ.

## ಪ್ರತಿಕೂಲ ಅನುಮಾನಗಳು

ಆರೋಪಿಯ ವಿರುದ್ಧದ ತೀರ್ಪನ್ನು ನ್ಯಾಯಾಲಯ ನೀಡಬಹುದು. ಕಾರಣ ಆರೋಪಿಯೊಬ್ಬರು ತಮ್ಮ ರಕ್ತ ಮಾದರಿ, ಕೈಬರಹ ಅಥವಾ ಬೆರಳಚ್ಚುಗಳನ್ನು ನೀಡಲು ನಿರಾಕರಿಸಬಹುದು. ಈ ನಿರಾಕರಣೆಯನ್ನೇ ಅಪರಾಧಗಳನ್ನು ಕುರುಹನ್ನಾಗಿ ತೆಗೆದು ಕೊಳ್ಳಲಾಗುತ್ತದೆ. (S.27) ಅಪರಾಧದ ಮಾಡಲು ಬಳಸಿರಬಹುದೆಂದು ನಂಬಲಾದ ಶಸ್ತ್ರಾಸ್ತ್ರಗಳು /ಸ್ಫೋಟಕಗಳು ವ್ಯಕ್ತಿಯೊಬ್ಬರ ಬಳಿ ಕಂಡು ಬಂದಲ್ಲಿ ಅಥವಾ ಅಪರಾಧವೊಂದು ನಡೆದ ಸ್ಥಳದ ಸುತ್ತಮುತ್ತ ಎಲ್ಲೇ ಆಗಲಿ ವ್ಯಕ್ತಿಯೊಬ್ಬರ ಬೆರಳಚ್ಚುಗಳು ದೊರೆತಲ್ಲಿ ಅಂಥವರನ್ನು ನ್ಯಾಯಾಲಯವು ಅಪರಾಧಿಯೆಂದು ಪರಿಗಣಿಸುವ ತೀರ್ಮಾನಕ್ಕೆ ಬರುವಂತಾಗುತ್ತದೆ. (S.52) ಇಂಥ ಪ್ರತಿಕೂಲವಾದ ಅನುಮಾನಗಳ ಸರಣಿಗಳು ಆರೋಪಿಯ ತಪ್ಪನ್ನು ಅನಿವಾರ್ಯವಾಗಿ ಸ್ಥಾಪಿಸುತ್ತವೆ. ಪರಿಣಾಮವಾಗಿ, ವ್ಯಕ್ತಿಯೊಬ್ಬರು ತಪ್ಪಿತಸ್ಥರೆಂದು ಸಾಬೀತಾಗುವವರೆಗೂ ಮುಗ್ಧರೆನ್ನಲು ಪುರಾವೆಯೊದಗಿಸುವ ಜವಾಬ್ದಾರಿ ಇಲ್ಲಿ ತಿರುಗುಮುರುಗಾಗಿದೆ.

## ೯. ರಕ್ಷಣೆಗಳು

ಸಂಘವೊಂದರ ನಿಷೇಧ ಮತ್ತು ಸಂಪರ್ಕ ತಡೆಯ ಆದೇಶಗಳ ಮರುಪರಿಶೀಲನೆಯೆಂಥ ಸೀಮಿತ ಉದ್ದೇಶಗಳನ್ನೊಳಗೊಂಡ ಪರಿಶೀಲನಾ ಸಮಿತಿಗಳನ್ನು ಸ್ಥಾಪಿಸುವ ಅವಕಾಶವನ್ನು ಪೊಟಾ ನೀಡುತ್ತದೆ. ಈ ಸಮಿತಿಗಳಲ್ಲಿ ರಾಜ್ಯ ಮತ್ತು ಕೇಂದ್ರ ಮಟ್ಟದ ಅಧಿಕಾರಿಗಳಿರುತ್ತಾರೆ. ಈ ಶಾಸನದಡಿ ದಾಖಲಾದ ಪ್ರಕರಣಗಳ ಪರಿಶೀಲನೆಗೆ ಮಾತ್ರ ಅವಕಾಶವಿರುವುದಿಲ್ಲ. ಅವುಗಳ ಪುನಶೀಲನೆ ಮತ್ತು ಪುನರ್ ವಿಮರ್ಶೆಯಂಥ ಸೀಮಿತ ಅಧಿಕಾರ ಕೂಡ ಆಡಳಿತಾರೂಢ ರಾಜಕೀಯ ಪಕ್ಷಕ್ಕೆ ಮತ್ತು ಕಾರ್ಯನಿರ್ವಾಹಕರಿಗೆ ಮಾತ್ರ ಇರುತ್ತದೆ.

ಈ ಶಾಸನದಲ್ಲಿರುವ ಇತರ ರಕ್ಷಣಾವಕಾಶಗಳೆಂದರೆ. ರಾಜ್ಯ ಮತ್ತು ಕೇಂದ್ರ ಸರಕಾರಗಳು ಅನುಮತಿ ನೀಡದರೆ ಮಾತ್ರ ನ್ಯಾಯಾಲಯಗಳು ಅಪರಾಧಗಳನ್ನು ಪರಿಗಣನೆಗೆ ತೆಗೆದು ಕೊಳ್ಳುತ್ತವೆ. [(S.49)] (ಟಾಡಾ ಕಾಯಿದೆಯಲ್ಲಿ ಪ್ರಕರಣಗಳನ್ನು ಅಂಗೀಕರಿಸಲು ಡೆಪ್ಯೂಟಿ ಪೊಲೀಸ್ ಸೂಪರಿಂಟೆಂಡೆಂಟರು ಮತ್ತು

ಪೊಲೀಸ್ ಇನ್ಸ್‌ಪೆಕ್ಟರ್ ಜನರಲ್ಲರ ಒಪ್ಪಿಗೆ ಅಗತ್ಯವಾಗಿತ್ತು.) ಅಪರಾಧ ತನಿಖೆಗೆ ಉನ್ನತ ಮಟ್ಟದ ಪೊಲೀಸು ಅಧಿಕಾರಿಗಳನ್ನು ನೇಮಿಸುವುದರಿಂದ ಶಾಸನದ ದುರ್ಬಳಕೆಯ ವಿರುದ್ಧ ಸ್ವಲ್ಪಮಟ್ಟಿನ ರಕ್ಷಣಾ ಕ್ರಮ ತೆಗೆದುಕೊಂಡಂತಾಗಿದೆಯೆನ್ನುವ ಸಿದ್ಧವಾಗದ ಪೂರ್ವಭಾವಿ ನಂಬಿಕೆಯಿದೆ [(S.50)] ಆರೋಪಿಯ ಕಾನೂನು ನೆರವನ್ನು ಪಡೆಯುವ ಹಕ್ಕು, ಬಂಧನದ ವಿಷಯವನ್ನು ಸಂಬಂಧಿಗಳಿಗೆ ಆ ಕೊಡಲೆ ತಿಳಿಸುವ ಹಕ್ಕು, ರೂಢಿಗತ ತಿಳಿವಳಿಕೆ ಪತ್ರವನ್ನು ಪೊಲೀಸರು ಬರೆಯಬೇಕಾದ ಕರ್ತವ್ಯ ಮುಂತಾದವುಗಳ ಸ್ಪಷ್ಟ ಉಲ್ಲೇಖಗಳಿವೆ. [(S.51)]

ಪೊಟಾದಲ್ಲಿರುವ ಒಂದು ಸ್ವಾಗತಾರ್ಹ ವಿಷಯವೆಂದರೆ, ಉಚ್ಚ ನ್ಯಾಯಾಲಯಕ್ಕೆ ಮೊರೆ ಹೋಗುವ ಹಕ್ಕನ್ನು ನೀಡಲಾಗಿದೆ. ಇದಕ್ಕೆ ಸಂಬಂಧಿಸಿದ ಮನವಿಯನ್ನು ಮೂವತ್ತು ದಿನಗಳೊಳಗೆ ಸಲ್ಲಿಸಬೇಕು; ಸಾಮಾನ್ಯ ಕಾನೂನಿನಲ್ಲಿ ತೊಂಬತ್ತು ದಿನಗಳ ಕಾಲಾವಕಾಶವಿರುತ್ತದೆ. ಈ ನಿರ್ಬಂಧವು ಮನವಿ ಸಲ್ಲಿಸುವ ಮತ್ತು ಪುನರ್ ಪರಿಶೀಲನೆಯ ಹಕ್ಕನ್ನು ಸಾಕಷ್ಟು ಮೊಟಕುಗೊಳಿಸುತ್ತದೆ; ಅಲ್ಲದೆ ನ್ಯಾಯಾಂಗೀಯ ಪರಿಹಾರದ ಲಭ್ಯತೆಯನ್ನು ಕೂಡ ನಿರ್ಬಂಧಿಸಲಾಗಿದೆ ಎನ್ನುವುದರ ಸೂಚನೆಯಾಗಿದೆ.

ಈ ರಕ್ಷಣಾ ಕ್ರಮಗಳನ್ನು ಸ್ವಾಗತಿಸಬಹುದಾದರೂ ಶ್ರೇಷ್ಠ ನ್ಯಾಯಾಲಯವು ಆದೇಶಿಸಿದ ಪ್ರತಿಯೊಬ್ಬ ಆರೋಪಿಯ ಮೂಲಭೂತ ಹಕ್ಕುಗಳು ದಿನದಿಂದ ದಿನಕ್ಕೆ ಉಲ್ಲಂಘನೆ ಯಾಗುತ್ತಲೇ ಇರುವುದನ್ನು ಕಾಣುತ್ತಿದ್ದೇವೆ. ಅದಕ್ಕೆ ಪ್ರತಿಯಾಗಿ ಯಾವುದೇ ಪರಿಣಾಮಕಾರೀ ವ್ಯವಸ್ಥೆಯಾಗಲೀ ಅಥವಾ ಶಿಕ್ಷೆಯಾಗಲೀ ಇಲ್ಲ. ಇದಲ್ಲದೆ ಮೇಲಿನ ಎಲ್ಲಾ ಅವಕಾಶಗಳೂ ತೋರಿಕೆಯದಾಗುತ್ತದೆ. ಏಕೆಂದರೆ ಪೊಲೀಸ್ ಅಧಿಕಾರಿಯೊಬ್ಬರೆದುರು ಆರೋಪಿಯೊಬ್ಬರು ತಪ್ಪೊಪ್ಪಿಗೆ ಮಾಡಿಕೊಂಡ ನಲವತ್ತೆಂಟು ಗಂಟೆಗಳಲ್ಲಿ ಚೀಫ್ ಜ್ಯುಡಿಷಿಯಲ್ ಮ್ಯಾಜಿಸ್ಟ್ರೇಟರ ಮುಂದೆ ಆರೋಪಿಯನ್ನು ಹಾಜರು ಪಡಿಸಬೇಕೆಂದಿದ್ದರೂ ನ್ಯಾಯಾಂಗ ಬಂಧನದ ನಂತರ ಪೋಲಿಸರ ವಶಕ್ಕೆ ಮತ್ತೆ ಹೋಗಬಹುದಾದ ಸಾಧ್ಯತೆಯಿದ್ದು ರಕ್ಷಣಾ ಕ್ರಮ ವ್ಯರ್ಥವಾಗುತ್ತದೆ. [(S.32 (4)].

### ಉಪಸಂಹಾರ

ಟಾಡಾ ಅವಧಿಯ ಹತ್ತು ವರ್ಷಗಳಲ್ಲಿ ಅದನ್ನು ನಿರ್ದಾಕ್ಷಿಣ್ಯವಾಗಿ ದುರ್ಬಳಕೆ ಮಾಡಿಕೊಳ್ಳಲಾಯಿತೆನ್ನುವುದು ನಮ್ಮ ಅನುಭವಕ್ಕೆ ಬಂದಿದೆ. ಅಲ್ಲದೆ ಆ ಶಾಸನ ಭಯೋತ್ಪಾದನೆಯ ಹಾವಳಿಯನ್ನು ನಿಯಂತ್ರಿಸುವಲ್ಲಿ ಶೋಚನೀಯವಾದ ಸೋಲನ್ನು ಕಂಡಿದೆ ಎನ್ನುವುದೂ ಸ್ಪಷ್ಟ. ಆದರೆ ವಾಸ್ತವದಲ್ಲಿ ವಿವೇಚನಾ ರಹಿತ ಹಿಂಸೆಯ ಕಲ್ಪನೆಗಳಿಂದ ಭೀತರಾಗಿ ಈ ಕರಾಳ ಶಾಸನದ ಹಸಿ ಸುಳ್ಳುಗಳನ್ನು ಒಪ್ಪಿಕೊಳ್ಳುತ್ತಲೇ ಇದ್ದೇವೆ. ಅದರ ತರ್ಕ ಮತ್ತು ಸ್ವರೂಪಗಳಿಂದಾಗಿ ಪೊಟಾದ ದುರ್ಬಳಕೆ ಮತ್ತು ಸೋಲಿಗಾಗಿ ಖಂಡಿಸಲು ಹಿಂದೆಗೆಯುತ್ತೇವೆ. ಪ್ರಜಾಪ್ರಭುತ್ವವನ್ನು ಮೊಟಕುಗೊಳಿಸುವ ಮೂಲಕ ಹಿಂಸೆಯನ್ನು ದಮನಗೊಳಿಸಬಹುದೆಂಬ ಪೂರ್ವ ನಂಬಿಕೆಯನ್ನಾಧರಿಸಿದ ಯಾವುದೇ ಶಾಸನಕ್ಕೆ ಇದು ಅನಿವಾರ್ಯ.

ಅಪರಾಧವನ್ನು ಉದ್ದೇಶ ಪೂರ್ವಕವಾಗಿ ಮೊದಲಿಗೇ ಪರಿಭಾಷಿಸುವ ಪೊಟಾದಂಥ ಶಾಸನದ ಬಗ್ಗೆ ಮಾತಾನಾಡುವಾಗ 'ದುರ್ಬಳಕೆ' ಎನ್ನುವುದು ಒಂದು ತಪ್ಪು ಪದವಾಗುತ್ತದೆ. ಅಪರಾಧಗಳೆಂದು ಹಣೆಪಟ್ಟಿ ಹೊಂದಿರುವ ಕ್ರಿಯೆಗಳೆಲ್ಲವನ್ನೂ ಅದು ಒಳಗೊಳ್ಳುತ್ತದೆ. ಅದರಿಂದಲೇ ಅದರ ಉದ್ದೇಶದ ನ್ಯಾಯಾನ್ಯಾಯವನ್ನು ಪರಿಶೀಲಿಸಬೇಕಾಗಿದೆ. ತಿದ್ದುಪಡಿ ಮಾಡಿ ಕಾನೂನನ್ನು ಜಾರಿಗೊಳಿಸುವ ಒಂದು ಭ್ರಷ್ಟಯಂತ್ರವು ವಿಚಾರಣೆ ಯೋಜನೆಯನ್ನು ನಡೆಸುವುದರಿಂದ 'ಬಳಕೆ' ಮತ್ತು 'ದುರ್ಬಳಕೆ' ಎಂಬ ಪದಗಳು ಒಂದರೊಳಗೊಂದು ಸೇರಿಕೊಂಡು ಬಿಡುತ್ತವೆ. ಒಬ್ಬರಿಗೆ ಬಳಕೆ ಎಂದಾಗುವುದು ಮತ್ತೊಬ್ಬರಿಗೆ ದುರ್ಬಳಕೆಯಾಗಿ ಬಿಡುತ್ತದೆ. ಈ ಸಂದರ್ಭದಲ್ಲಿ ಪೊಟೊ ವಿಧಿವಿಧಾನಗಳೂ ಸೇರಿಕೊಂಡು ಮತ್ತಷ್ಟು ಕೆಟ್ಟದಾಗಿ ಕಂಡು ಬರುತ್ತದೆ.

ವಿಶೇಷ ನ್ಯಾಯಾಲಯಗಳು ದೂರದ ಸ್ಥಳಗಳಲ್ಲಿರುವುದು ಮತ್ತು ಪೊಲೀಸರ ವಶದಲ್ಲಿ ದೀರ್ಘಕಾಲ ಇರಬೇಕಾಗಿರುವುದು ಹಿಂಸೆಗೆ ಮತ್ತಷ್ಟು ಅವಕಾಶವನ್ನು ನೀಡಿದಂತಾಗುತ್ತದೆ. ಆರು ತಿಂಗಳವರೆಗೆ ಆರೋಪ ಪಟ್ಟಿಯನ್ನು ಸಲ್ಲಿಸಲು ಅವಕಾಶ ಇರುವ ಕಾರಣ ಪೊಲೀಸರು ಅಲ್ಲಿಯವರೆಗೆ ಅದನ್ನು ನ್ಯಾಯಾಲಯಕ್ಕೆ ಸಲ್ಲಿಸುವುದೇ ಇಲ್ಲ. ಪೊಲೀಸರ ಮುಂದೆ ನೀಡಿದ ತಪ್ಪೊಪ್ಪಿಗೆಗಳನ್ನು ನ್ಯಾಯಾಲಯ ಮಾನ್ಯ ಮಾಡುವುದು ಅಪರಾಧಿಗಳಿಗೆ ಹೆಚ್ಚು ಶಿಕ್ಷೆಯಾಗಲೆಂಬ ಉದ್ದೇಶಕ್ಕೆ ಪೂರಕ ಎನ್ನುವುದಕ್ಕಿಂತ ಹೆಚ್ಚು ಹಿಂಸೆ ಮತ್ತು ಕಡಿಮೆ ಗುಣಮಟ್ಟದ ತನಿಖೆಗಳಿಗೆ ಅವಕಾಶ ಎನ್ನಬಹುದು. ಅಂಥ ತನಿಖೆಗಳು ಮುಕ್ತ ವಿಚಾರಣೆಗಳು ಇಲ್ಲದ ಕಾರಣ ಮುಂದುವರೆಯುವ ಸಾಧ್ಯತೆ ಇರುತ್ತದೆ. ಸಾಕ್ಷಿಗಳ ಗುರುತನ್ನು ಸುರಕ್ಷಿತವಾಗಿಡ ಬೇಕೆಂದಿರುವುದರಿಂಧ ಸಾಕ್ಷಿಗಳನ್ನು ಹುಡುಕುವ ಪ್ರಯತ್ನವನ್ನೇ ಪೊಲೀಸರು ಕೈಬಿಡುವಂತೆ ಮಾಡುತ್ತದೆ. ಏಕೆಂದರೆ ವೃತ್ತಿಪರ ಸಾಕ್ಷಿಗಳು ಪೊಲೀಸರಿಗೆ ಲಭ್ಯವಿರುತ್ತದೆ; ಅವೇ ಅವರಿಗೆ ಸಾಕಾಗುತ್ತವೆ. ಪ್ರಕರಣಗಳನ್ನು ದಾಖಲಿಸುವ ಆಂದೋಲನಕ್ಕೆ ಕಡಿವಾಣವನ್ನು ಸಂಪೂರ್ಣವಾಗಿ (ಪೊಲೀಸರಿಗೆ) ನೀಡಲು ಸಿದ್ಧತೆ ನಡೆದಿದೆ; ಜಾಮೀನು ಪಡೆಯಲು ಇರುವ ನಿರ್ಬಂಧಗಳಿಂದಾಗಿ ಆರೋಪಿಯು ಜೈಲಿನಲ್ಲೇ ಉಳಿಯುತ್ತಾನೆ/ಳೆ.

ಮುಗ್ಧರು ಮತ್ತು ತಪ್ಪಿತಸ್ಥರ ನಡುವಿನ ವ್ಯತ್ಯಾಸವನ್ನು ಇಲ್ಲಿ ಕಡೆಗಣಿಸಲಾಗುತ್ತದೆ. ಸಾಮಾಜಿಕ ದ್ರಷ್ಟಾರರು ಮತ್ತು ಸಮಾಜ ವಿರೋಧಿಗಳು, ಪ್ರಜಾಸ್ವಾತಂತ್ರ್ಯದ ಚಳವಳಿಕಾರರು ಮತ್ತು ದುಷ್ಟರು, ಕವಿಗಳು ಮತ್ತು ಸಂಘ ಸಂಸ್ಥೆಗಳಿಗೆ ತಟಸ್ಥರಾಗಿರುವವರು ಮತ್ತು ದ್ರೋಹಿಗಳು, ರೈತ ಚಳವಳಿಗಾರರು ಮತ್ತು ಕಳ್ಳರು - ಎಲ್ಲರೂ ಭಯೋತ್ಪಾದಕರೆಂಬ ಒಂದೇ ವರ್ಗಕ್ಕೆ ಸೇರಿ ಹೋಗುತ್ತಾರೆ. ಎಲ್ಲಾ ಸಾಮಾಜಿಕ ಮೌಲ್ಯಗಳು, ರಾಜಕೀಯ ತತ್ವಗಳು ಮತ್ತು ನೈತಿಕ ಪರಾಮರ್ಶೆಗಳು ಇಂಥ ಕಾನೂನುಗಳ ಜಗತ್ತಿನಲ್ಲಿ ದಾರಿ ತಪ್ಪಿ ಬಿಡುತ್ತವೆ.

ಇದರ ಪರಿಣಾಮ ಕೇವಲ ಅಸಂಖ್ಯಾತ ಕಥೆಗಳಿಗೆ ಕೆಲವೊಮ್ಮೆ ಅಸಂಬದ್ಧ, ಮತ್ತು ಕೆಲವೊಮ್ಮೆ ವಿನೋದಕರ ಕಥೆಗಳಿಗೆ -ಮಾತ್ರ ಸೀಮಿತವಾಗಿರುವುದಿಲ್ಲ, ಟಾಡಾ ಜಾರಿಯಲ್ಲಿದ್ದ ಅವಧಿಯಲ್ಲಿ ಕಂಡ ಮಾನವ ಸಂಕಷ್ಟಗಳಿಗೆ ಅವು ಸಂಬಂಧಿಸಿರುತ್ತವೆ. ಅಂಥ ಕಾನೂನುಗಳು ಉಂಟು ಮಾಡುವ ವ್ಯವಸ್ಥಿತವಾದ ಹಿಂಸೆ ಕೇವಲ ಜನರ ಮೇಲೆ ಮಾತ್ರವಲ್ಲ, ಒಂದು ಪ್ರಜಾ ಪ್ರಭುತ್ವದ ಸಮಾಜ ಮತ್ತು ರಾಜಕೀಯಗಳು ಆಧರಿಸಿರುವ ತತ್ವಗಳ ಮೇಲಿನ ಧಾಳಿ ಕೂಡ. ಆ ತತ್ವಗಳಿಗಾಗಿ ನಮ್ಮ ಹಿಂದಿನ ಪೀಳಿಗೆಗಳವರು ಹೋರಾಡಿದ್ದಾರೆ; ತಮ್ಮ ಪ್ರಾಣಗಳನ್ನು ತೆತ್ತಿದ್ದಾರೆ. ಮೂಲಭೂತ ಹಕ್ಕು ಮತ್ತು ಸ್ವಾತಂತ್ರ್ಯಗಳು ನಿರ್ಬಂಧಿತವಾದವು; ಆದರೂ ಯಾವುದೇ ಒಂದು ಭಯದ ಹಿನ್ನೆಲೆಯಲ್ಲಿ ಇಂಥ ಕಾನೂನಿನ ಜಾರಿಗಾಗಿ ಪ್ರಯತ್ನ ನಡೆದಿದೆ. ಟಾಡಾ ಕಾಯಿದೆ ಜಾರಿಗೆ ಬಂದಾಗಲೂ ಪಂಜಾಬಿನಲ್ಲಿದ್ದ ಸಶಸ್ತ್ರ ಹೋರಾಟದ ಕಾರಣವನ್ನು ನೀಡಲಾಗಿತ್ತು. ಒಂದು ದಶಕದ ನಂತರ ಇಪ್ಪತ್ತೈದು ರಾಜ್ಯಗಳಲ್ಲಿ ಇಪ್ಪತ್ಮೂರು ರಾಜ್ಯಗಳ ಮೇಲೆ ಹಾಗೂ ಏಳು ಕೇಂದ್ರಾಡಳಿತ ಪ್ರದೇಶಗಳಲ್ಲಿ ಎರಡು ಪ್ರದೇಶಗಳ ಮೇಲೆ ಟಾಡಾ ಕಾಯಿದೆಯನ್ನು ಹೇರಲಾಗಿತ್ತು. ಈಗ ಇಡೀ ದೇಶದಲ್ಲಿ ಪೊಟೊ ಜಾರಿಗೊಳ್ಳಲಿದೆ. ಇಂಥ ಕಾನೂನುಗಳು ಯಶಸ್ಸನ್ನು ಕಾಣುತ್ತಲೇ ಬಂದಿವೆ.

ಇದರ ಫಲಿತಾಂಶದ ಬಗ್ಗೆ ಅಚ್ಚರಿಪಡಬೇಕಾಗಿಲ್ಲ. ಸಮಾಜದಲ್ಲಿ, ರಾಜಕೀಯ ನೀತಿಗಳಲ್ಲಿ ಮತ್ತು ಪ್ರಭುತ್ವವು ಸಂಸ್ಥೆಗಳ ಮೂಲಕ ಚಾಲನೆಗೊಳಿಸಿರುವ ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಹೆಚ್ಚುತ್ತಿರುವ ಹಿಂಸೆಯ ಬೇರುಗಳಿವೆ. ಈ ಹಿಂಸೆಯ ವಿರುದ್ಧ ರಾಜಕೀಯ ಪ್ರತಿಭಟನೆ ಮತ್ತು ಭಿನ್ನಮತಗಳಿಗೆ ಪ್ರಜಾಪ್ರಭುತ್ವದಲ್ಲಿರುವ ಅವಕಾಶವನ್ನು ಬಳಸಿಕೊಳ್ಳುವ ಮೂಲಕ ಹೋರಾಡುವುದೆಂದರೆ, ಅದನ್ನು ಸಂವಿಧಾನದ ಚೌಕಟ್ಟಿನ ಹೊರಗೆ ತಳ್ಳುತ್ತದೆ. ಪ್ರಭುತ್ವಕ್ಕಿರುವ ಬೆದರಿಕೆ ಪರಾಕಾಷ್ಠೆಗೇರುತ್ತದೆ. ರಾಷ್ಟ್ರದ ಏಕತೆ ಮತ್ತು ಸಮಗ್ರತೆಗಳಿಗೆ ಗಂಭೀರ ಬೆದರಿಕೆಗಳಿವೆ ಎನ್ನುವ ತಾರಕಸ್ವರದ ಹಿಸ್ಟೀರಿಯಾ ಚಲಾವಣೆ ಪಡೆಯುತ್ತದೆ. ಇತ್ತ ಪ್ರಭುತ್ವವು ಒಂದು ಪ್ರಜಾಪ್ರಭುತ್ವವಾದೀ ಜಾತ್ಯಾತೀತ ಮತ್ತು ಸಮಾಜವಾದೀ ಗಣರಾಜ್ಯದಲ್ಲಿ ತನ್ನದೇ ಅಡಿಗಲ್ಲನ್ನು ಅಲ್ಲಾಡಿಸುತ್ತದೆ. ಆ ಮೂಲಕ ಯಾವುದರ ವಿರುದ್ಧ ತನ್ನ ಹೋರಾಟ ಆರಂಭವಾಯಿತೋ ಅದರ ಪ್ರತಿಬಿಂಬವೇ ತಾನಾಗಿ ಬಿಡುತ್ತದೆ. ದುರಂತವೆಂದರೆ, ಯಾವುದೇ ತಪ್ಪು ಮಾಡಿಲ್ಲದ ನೂರಾರು ಜನರು ಬೀದಿಗಳಲ್ಲಿ ಸಾಯುತ್ತಾರೆ. ಸಾವಿರಾರು ಮಂದಿ ಜೈಲುಗಳಲ್ಲಿ ಕೊಳೆಯುತ್ತಾ ಬಿದ್ದಿರುತ್ತಾರೆ.

■ *ವೆಂ. ವನಜ*
ಮೈಸೂರು

## ವಚನ

ಅಕ್ಕ ನೀ ಹುಟ್ಟಿದ ಗರ್ಭಕ್ಕೆ
ಕಿಚ್ಚನ್ನು ಹಚ್ಚಿದರಕ್ಕಾ
ಹೆಂಗಳ ಮಾನ ಪ್ರಾಣ ಕಾಯ್ವ ಧರ್ಮಕ್ಕೆ
ಕಿಚ್ಚನ್ನು ಹಚ್ಚಿದರಕ್ಕಾ
ಹೆಣ್ಣಾಗಿನ ಕಣ್ಣು ಕುಲದಾ ಹಿರಿತನಕ್ಕೆ
ಮಣ್ಣಾಗಿನ ಕಿಚ್ಚನ್ನು ಹಚ್ಚಿದರಕ್ಕಾ
ನಿನ್ನೊಳಗಿನ ಅಕ್ಕರೆಯ ಕನಸುಗಳ
ಕೆಡುಹಿದಾ ಮನಸ್ಸಿಗೆ
ಗುರುಲಿಂಗ ಹಂಸ ಸ್ವರೂಪಿಯು
ಕಾಣ ಸಿಗುವನೇನಕ್ಕಾ

■ *ಹಂಸಾ . ಆರ್*

"ಪ್ರತಿ ಶನಿವಾರ ಸಂಜೆ 5-00 ಗಂಟೆಗೆ ರವೀಂದ್ರ ಕಲಾಕ್ಷೇತ್ರದ ಹಿಂಭಾಗದಲ್ಲಿರುವ ಬಯಲು ರಂಗಮಂದಿರದಲ್ಲಿ ಮಾನಸದ ಸಭೆಯನ್ನು ನಡೆಸಲಾಗುವುದು. ಆಸಕ್ತಿಯುಳ್ಳವರು ಅಂದು ಮಾನಸ ಬಳಗದವರನ್ನು ಸಂಪರ್ಕಿಸಬಹುದು."

# ವ್ಯತ್ಯಾಸ

ಇವಳು ಬಾಗಿಲು ತೆರೆದು ನೋಡುತ್ತಾಳೆ
ಮತ್ತೆ ಮತ್ತೆ ಆಕಾಶವನ್ನೇ
ಚಲಿಸುವ ಮೋಡಗಳನೇ
ಅಲುಗುವ ಎಲೆಗಳನೇ, ಕೆಂಪು ಹೂಗಳನೇ
ಬಟ್ಟೆ ಹರಹುವ ತಂತಿಗಳಲಿ
ಮುತ್ತು ಪೋಣಿಸಿದಂತಿರುವ ನೀರ ಹನಿಗಳನೇ
ಉಲಿಯುತ್ತಾಳೆ ಹಕ್ಕಿಗಳ ಚಿಲಿಪಿಲಿಗೆ
ಬಿಡಿಸಿಟ್ಟ ಹತ್ತಿಯ ಮೋಡಗಳು ಚದುರಿದಂತೆಲ್ಲ
ನಿಟ್ಟುಸಿರಿಟ್ಟು ಒಳಗಿನದೆಲ್ಲ ಹೊರಹಾಕುತ್ತಾಳೆ
ಮುಗುಳ್ನಕ್ಕು ಒಳನಡೆಯುತ್ತಾಳೆ.

ನೆರೆಮನೆಯಾಕೆ ಸದ್ದು ಮಾಡಿ
ತೆರೆಯುತ್ತಾಳೆ ಬಾಗಿಲು
ಮತ್ತೊಮ್ಮೆ ಮುಚ್ಚುತ್ತಾಳೆ ಕದ
ಕಿವಿ ಕಿವುಡಾಗುವಂತೆ
ಬರುತ್ತಾಳೆ ಮತ್ತೆ ಹರವುತ್ತಾಳೆ
ಬಣ್ಣದ ಬಟ್ಟೆಗಳನು
ಇವಳ ಕಣ್ಣು ಕುಕ್ಕಿಸಬೇಕೆಂದೇ....
ಇಂದು ಹಸಿರು ಹೊಸ ನೈಟಿ
ನಾಳೆ ಮಗಳ ನೀಲಿ ಚೂಡಿದಾರ
ನೆನ್ನೆ ಗಂಡನ ಹೊಸ ಪ್ಯಾಂಟು
ಮಗನ ಚಡ್ಡಿ, ಶರಟು

ಕುದುರೆಯಂತೆ ಕೆನೆದು ನಗುತ್ತಾಳೆ
ಕಪ್ಪೆಯಂತೆ ವಟಗುಟ್ಟುತ್ತಾಳೆ
ಅವಳ ಇರುವಿನ ಇಂಚಿಂಚೂ
ಅರಚು ಹುಳುವಿನ ಹಾಗೆ ಶಬ್ದ ಮಾಡುತ್ತಾ
ಕಾಯುತ್ತಾಳೆ ಇವಳಿಗಾಗಿ
ಇವಳ ಪ್ರತಿಕ್ರಿಯೆಗಾಗಿ
ಮುಗಿಯುತ್ತಲೇ ಇಲ್ಲ ಕಾಯುವಿಕೆ
ಮೊದಲಿರಲಿಲ್ಲ......
ಈಗ ಎದ್ದಿದೆ ನಡುವೆ
ಗೋಡೆ!

ಅವಳು ಹೊರಬಂದಾಗ
ಇವಳು ಒಳ ಹೋಗುತ್ತಾಳೆ
ಇವಳು ಹೊರ ಬಂದಾಗ
ಅವಳು ಒಳ ಹೋಗುತ್ತಾಳೆ
ರಾತ್ರಿ ಬೆಳಗಿನ ಪರಿಯಲಿ.

*ನಳಿನಿ ವಿಜಯಕುಮಾರ್, ಹಾಸನ*

## ಅಬಲೆ

ಬಾಲ್ಯದಲಿ ಹೆಣ್ಣೆಂಬ ಶಾಪಕೆ ಗುರಿಯಾಗಿ
ಯೌವನದಲಿ ತನ್ನಾಸೆಗಳೆಲ್ಲವ ಬದಿಗೊತ್ತಿ
ಆಜ್ಞನೆಟ್ಟ ಆಲಕೆ ಜೋತುಬಿದ್ದು
ಬದುಕು ಸಾಗಿಸುತಿಹಳು ಮೂಕ ವೇದನೆಯೊಳು

ಹುಟ್ಟಿನಿಂದ ಕತ್ತಲೆಯಲ್ಲಿ ಕೊಳೆತು
ಬೆಳೆಯುತ ಎಲ್ಲವ ನೆನೆನೆನೆದು
ಸುಖ ಶಾಂತಿ ನೆಮ್ಮದಿಗಳ ಮರೆತು
ಪಡೆದಿಹಳು ಕೀಳರಿಮೆಯ ಪಟ್ಟವನು

ಮಗುವಾಗುವುದು ದೈವಕೃಪೆ
ಗಂಡಾದರೆ ಗಂಡನ ಕೃಪೆ
ಹೆಣ್ಣಾದರೆ ಅವಳ ತಪ್ಪೇ?
ಎಲ್ಲರ ನಿಲುವಲಿ ಅವಳೇ ತಪ್ಪಿತಸ್ಥೆ

ಗರ್ಭ ಧರಿಸುವುದೇ ಅವಳ ಕಾಯಕ
ಹೆಣ್ಣು ಹುಟ್ಟಿದರೆ ಅವಳಿಗೆ ನರಕ
ಒಂದರ ಮೇಲೊಂದರಂತೆ ಹೆಣ್ಣಾಗಿ
ಕಾಯಬೇಕವಳು ಗಂಡಾಗುವವರೆಗೆ ಬೆಂಡಾಗಿ

ತೊರೆದು ಬಾಳಿನ ಸುಖ ಸಂತೋಷ
ಉಳಿಯುವಳು ಕೂಸಿನ ಸಂತಸದೊಳು
ತ್ಯಾಗಮಯಿ ಕರುಣಾಮಯಿ ಇವಳು
ಶತ ಶತಮಾನಗಳು ಕಳೆದರು ಅಬಲೆಯಲ್ಲವೇ ಇವಳು

■ *ಶಾರದೆ ಪ್ರಿಯ*

ಮಾನಸ ಪತ್ರಿಕೆ ಯಾವ ಸಂಸ್ಥೆಯ, ಸರ್ಕಾರದ ನೆರವಿಲ್ಲದೇ ಪ್ರಕಟವಾಗುತ್ತಿರುವ ಮಹಿಳೆಯರೇ ನಡೆಸುತ್ತಿರುವ ಸ್ವಾಯತ್ತ ಪತ್ರಿಕೆ. ಓದುಗರು ಹಾಗೂ ಸಹೃದಯರು ನೀಡುವ ಆರ್ಥಿಕ ನೆರವೇ ಪತ್ರಿಕೆಯ ಜೀವಾಳ. ಚಂದಾದಾರರಿಗೆ ಚಂದಾ ಅವಧಿ ಮುಕ್ತಾಯವಾದುದರ ಬಗ್ಗೆ ಸೂಚನೆಯನ್ನು ನೀಡಲಾಗುತ್ತದೆ. ಓದುಗರು ತಕ್ಷಣ ಚಂದಾ ನವೀಕರಿಸಬೇಕೆಂದು ಕೋರುತ್ತೇವೆ. ಪತ್ರಿಕೆಯು ಉಳಿದು ಬೆಳೆಯಬೇಕಾದರೆ ಓದುಗರ ಸಹಕಾರ ಅತ್ಯಗತ್ಯ.

**ವಾರ್ಷಿಕ ಚಂದಾ : 50 ರೂ.**

**ಸಂಸ್ಥೆಗಳಿಗೆ : 100 ರೂ.**

*ಸಂ. ಮಂಡಳಿ*

REGD No. CPMG/KA/BGE/289/2002

BOOK -POST
PRINTED MATTER

ವಿಳಾಸ :
**ಮಾನಸ**
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು - 560 067